# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಮನುಷ್ಯರಿಗೆ ಮೊತ್ತಮೊದಲು ತಲೆಯೆತ್ತುವಂಥಾದ್ದು ಧನ ಲೋಭವೇ. ಕಾರಣ, ಅದು ಪ್ರತಿಯೊಂದಕ್ಕೂ ಬೇಕಾದುದು. ನ್ಯಾಯಾನ್ಯಾಯಗಳ ಪರಿವೆಯಿಲ್ಲದವರಿಗೆ ಕಳ್ಳತನವು ಧನ ಸಂಪಾದನೆಗೆ ದಾರಿಯಾಗಿದೆ. ಅದರಲ್ಲೇ ಪಳಗಿ ಹೋದರೆ, ಸುಲಿಗೆಯೊಂದಿಗೆ ಕೊಲೆ ಮಾಡುವುದೂ ಅವರಿಗೊಂದು ಆಟದಂತೆ. ಅದಕ್ಕೆ ಉತ್ಸಾಹ ಬರಲು ಕುಡಿತವೂ ಸಹಾಯಕವಾಗುತ್ತದೆ. ಅಂಥವರಿಗೆ ತಾತ್ಕಾಲಿಕವಾಗಿ ವಿಜಯ ದೊರೆತರೂ, ಅದುವೇ ಮಾರಕವಾಗಿ, ಪಾಪದ ಫಲ ಅನುಭವಿಸುವಂತೆ ಮಾಡುವ ಚೆಂದವು "ಕವುಜಗದ ಸಾಕ್ಷಿ" ಕಥೆಯಲ್ಲಿದೆ.

## ಅಮರವಾಣಿ

ಯದಿ ದಾತುಃ ಸಖಾಲುಬ್ಧಃ ದಾನಂ ತತ್ರ ಹಿದುರ್ಲಭಮ್
ನ ದೃಶ್ಯತೇ ಕಲ್ಪತರೋರ್ಮೂಲೇ ಕಂಟಕಕುಂಜವತ್

ದಾನ ಗುಣವಿರುವವನಿಗೆ ಲೋಭಿಯಾದ ಮಿತ್ರನಿದ್ದರೆ ದಾನ ದೊರೆಯಲಾರದು. ಆ ಲೋಭಿ ಕಲ್ಪವೃಕ್ಷದ ಕೆಳಗೆ ಮುಳ್ಳಿನ ಪೊದರಿನಂತಿರುವನು.

ಸಂಪುಟ : ೭೪ ಮಾರ್ಚಿ '೮೫ ಸಂಚಿಕೆ : ೩

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



## ವಿಶ್ವದೊಳಗೇ ಬಹು ದೊಡ್ಡ ಟೆಲಿಸ್ಕೋಪ್



ವಿಶ್ವದೊಳಗೆಲ್ಲಾ ಬಹು ದೊಡ್ಡದಾದ ಟೆಲಿಸ್ಕೋಪ್ ನಮ್ಮ ದೇಶದ ಪಾಲ್‌ಚಂದ್ ನಗರದಲ್ಲಿ ರೂಪಿಸಲ್ಪಟ್ಟಿದೆ. ೧೫.೭ ಮೀಟರುಗಳಷ್ಟು ಉದ್ದಕ್ಕೆ, ೮.೭ ಮೀಟರುಗಳಷ್ಟು ಅಗಲಕ್ಕೆ, ೧೧.೭ ಮೀಟರುಗಳಷ್ಟು ಎತ್ತರಕ್ಕೂ ಇರುವ ಈ ೨೩೦ ಸೆ. ಮೀ. ಟೆಲಿಸ್ಕೋಪನ್ನು ಸಿವಿಲ್ ಸೀನಿಯೋಷನ್ ವಿಭಾಗದೊಳಗಿನ ಭಾರತೀಯ ಖಗೋಳ ವಿಜ್ಞಾನ ಸಂಸ್ಥೆ ಉಪಯೋಗಿಸುತ್ತದೆ.

## ನೂರು ವರ್ಷ ಬದುಕುವುದು ಹೇಗೆ ?



ದಕ್ಷಿಣ ಮಲೇಷಿಯಾದೊಳಗಿನ ಮುವಾರಿಗೆ ಸೇರಿದ ಓಮರ್ ಬೇದಾನ್ ಎಂಬ ೧೧೮ ವರ್ಷಗಳ ವೃದ್ಧನು, ಮನುಷ್ಯನು ನೂರು ವರ್ಷ ಹಾಗೂ ಅದಕ್ಕಿಂತಲೂ ಹೆಚ್ಚು ಕಾಲ ಬದುಕುವುದೇನೂ ದೊಡ್ಡ ಕಷ್ಟವಲ್ಲ ಎನ್ನುತ್ತಾನೆ. ಆದರೆ ಹಾಗೆ ಜೀವಿಸಬೇಕೆಂದುಕೊಳ್ಳುವವರು, ಸಹನೆಯನ್ನು ಸ್ವಲ್ಪವೂ ಕಳೆದುಕೊಳ್ಳಬಾರದೆಂದೂ ಕೊಟ್ಟ ಮಾತು ತಪ್ಪಬಾರದೆಂದೂ, ಸುಳ್ಳು ಹೇಳಕೂಡದೆಂದೂ, ಸಾಲ ತೆಗೆಯಬಾರದೆಂದೂ ಅವನು ಹೇಳುತ್ತಾನೆ.

## ಅನಾಥ ಯುವಕನ ಪ್ರಾಮಾಣಿಕತೆ



ಹಾಲಿವುಡ್‌ಗೆ ಸೇರಿದ ೧೭ ವರ್ಷ ವಯಸ್ಸಿನ ಎರಿಕ್ ಡೀ ವೈಲ್ಡ್ ಎಂಬ ಅನಾಥ ಯುವಕನಿಗೆ ನಿರ್ಜನ ಪ್ರದೇಶದಲ್ಲಿ ತಿರುಗುವುದೆಂದರೆ ಬಹಳ ಇಷ್ಟ. ಒಂದು ಸಾರಿ ಪೊದರಿನೊಳಗೆ ಒಂದು ಚೀಲವಿರುವುದನ್ನು ಕಂಡನು. ಅದರಲ್ಲಿ ನಗಗಳಿದ್ದುವು. ಅವನು ಅದನ್ನು ಪೋಲಿಸಿಗೆ ಒಪ್ಪಿಸಿದನು. ಅದು ತನ್ನದೆಂದು ೧೪೦೦ ಮಂದಿ ಬಂದರೂ, ಯಾರು ತಮ್ಮದೆಂದು ನಿರೂಪಿಸಲಾಗದೆ ಹೋದರು. ಫ್ಲೋರಿಡಾ ಕಾನೂನಿನಂತೆ ಆ ಚೀಲವನ್ನು ಎರಿಕ್‌ನಿಗೇ ಕೊಟ್ಟುಬಿಟ್ಟರು. ಅದರಲ್ಲಿದ್ದ ನಗಗಳ ಬೆಲೆ ೩೫ ಕೋಟಿ ರೂಪಾಯಿಗಳಷ್ಟು !

# ನಿಮಗೆ ಗೊತ್ತೇ ?

೧. ವಿಶ್ವಖಂಡದೊಳಗೆಲ್ಲಾ ದೊಡ್ಡ ದ್ವೀಪವು ಯಾವುದು ?

೨. ಪ್ರಸ್ತುತದ ಸ್ಪೇಯಿನ್, ಪೋರ್ಚುಗಲ್ ಪ್ರಾಂತಗಳ ಪ್ರಾಚೀನ ನಾಮಧೇಯವು ಏನೆಂದು ಗೊತ್ತಿದೆಯೇ ?

೩. ಇಜ್ರಾಯೇಲಿನ ಪ್ರಧಾನ ರೇವು ಪಟ್ಟಣವು ಯಾವುದು ?

೪. ಸೂಯೆಜ್ ಕಾಲುವೆಯ ಮೊದಲಿನಲ್ಲಿಯೂ, ಕೊನೆಯಲ್ಲಿಯೂ ಇರುವ ರೇವುಪಟ್ಟಣಗಳು ಯಾವುವೆಂದು ನಿಮಗೆ ತಿಳಿದಿದೆಯೇ ?

೫. ಸೋವಿಯಟ್ ರಷ್ಯಾ, ಅಫ್‌ಘನ್‌ಸ್ಥಾನ್ ಸರಿಹದ್ದಿನಲ್ಲಿ ಪ್ರವಹಿಸುವ ನದಿ ಯಾವುದೆಂದು ಹೇಳುವಿರಾ ?

(ಉತ್ತರ ೬೪ ನೇ ಪುಟದಲ್ಲಿ)



# ಇಬ್ಬರು ಯಜಮಾನರು

ಒಂದು ಊರಿನಲ್ಲಿ ಸೀತಾಪತಿ ಮತ್ತು ಸೋಮನಾಥರೆಂಬ ಗೃಹಸ್ಥರು ನೆರೆಹೊರೆ ಮನೆಯವರಾಗಿದ್ದರು. ಇಬ್ಬರೂ ಸಾಕಷ್ಟು ಧನವಂತರೇ, ಆದರೆ ಅವರಿಬ್ಬರ ಸ್ವಭಾವದಲ್ಲಿ ವ್ಯತ್ಯಾಸವಿದ್ದಿತು. ಪ್ರತಿ ಚಿಕ್ಕ ವಿಷಯವನ್ನೂ ದೊಡ್ಡದಾಗಿಸಿ ಗಲಾಟೆ ಎಬ್ಬಿಸುವುದು ಸೀತಾಪತಿಯ ಗುಣವಾದರೆ, ಆಕಾಶ ಕಳಚಿ ಮೇಲೆ ಬಿದ್ದರೂ ಚಲಿಸದಿರುವುದು ಸೋಮನಾಥನ ಗುಣ.

ಒಂದು ದಿನ ಸೀತಾಪತಿಯ ಮನೆಯಲ್ಲಿ ನಾಲ್ಕು ಬೆಳ್ಳಿಯ ನಾಣ್ಯಗಳು ಕಾಣೆಯಾದುವು. ಸೀತಾಪತಿ ಮನೆ ಪೂರಾ ಹುಡುಕಿದನು. ಹೆಂಡತಿಯನ್ನು ಕೇಳಿದನು.

"ನಿಮ್ಮನ್ನು ಕೇಳದೆ ನಾನು ಎಂದಾದರೂ ತೆಗೆದಿದ್ದೇನೆಯೆ? " ಎಂದಳು ಹೆಂಡತಿ.

" ಅದಕ್ಕೇ ನಾನು ಮನೆ ಪೂರಾ ಹುಡುಕಿ ನಿನ್ನನ್ನು ಕೇಳುವುದು," ಎಂದು ಹೇಳಿ ಮಗನನ್ನು ಕರೆದು ಕೇಳಿದನು. ತಾನು ಆ ಹಣ ತೆಗೆಯಲಿಲ್ಲವೆಂದು ಮಗನೂ ಹೇಳಿದನು.

" ಹಾಗಾದರೆ ಆ ಹಣ ಏನಾಯಿತೆಂದು ಅರ್ಥ? " ಎಂದು ಕೋಪದಿಂದ ಕೂಗಿದನು ಸೀತಾಪತಿ.

ಸೀತಾಪತಿಯ ಹೆಂಡತಿಯೂ, ಮಗನೂ, ಸಹಾ ಮನೆಯೊಳಗೆಲ್ಲಾ ಹುಡುಕಿದರು. ಹೋದ ಹಣ ಕಾಣಲೇ ಇಲ್ಲ. ಕಡೆಗೆ ಸೀತಾಪತಿಯ ಹೆಂಡತಿ ಗಂಡನೊಂದಿಗೆ, " ಏನಾದರೂ ನೀವು ಚಿಲ್ಲರೆ ಹಣವನ್ನು ಗೂಡಿನೊಳಗೆ ಇಡುವುದು ತಪ್ಪುರೀ. ನಮ್ಮ ಕೆಲಸದವಳಿಗೆ ಇತ್ತೀಚೆಗೆ ಕೈ ಕಪಟ ಸ್ವಲ್ಪ ಬಂದ ಹಾಗಿದೆ. ಅವಳು ಮನೆಯೊಳಗೆ ಕಸಬಳಿದು. ಒರೆಸಿ ಅದೂ ಇದೂ ಅತ್ತಿತ್ತ ಇಡುವಾಗ, ಇಷ್ಟು ಹುಣಿಸೇ ಹಣ್ಣೊ, ಬೇಳೆಯೋ, ಅಕ್ಕಿಯೋ ಮಡಿಲಲ್ಲಿ ಕಟ್ಟಿಕೊಂಡು ಹೋಗಲು ಶುರುಮಾಡಿದ್ದಾಳೆ " ಎಂದಳು.

" ಅದು ನಿಜವೇ ಅಪ್ಪಾ, ಮೊನ್ನೆ ನಾನೇ ಸ್ವತಃ ನೋಡಿ, ಅಮ್ಮನ ಹತ್ತಿರ ಹೇಳಿದೆ " ಎಂದನು ಮಗ.

" ಅದಕ್ಕೆ ನೀನೇನು ಮಾಡಿದಿ? " ಎಂದು ಸೀತಾಪತಿ ಹೆಂಡತಿಯನ್ನು ಕೇಳಿದನು.

" ಅವಳು ಬಹಳ ಮೊಂಡಿ ಹೆಂಗುಸು. ಸೆರಗಿನಲ್ಲಿ ಅದೇನು ಕಟ್ಟಿಕೊಂಡಿದ್ದೀ ಅಂತ ಕೇಳಿದರೆ, ನೀವೇ ಅಲ್ವೇನಮ್ಮಾ ಈ ಅಕ್ಕಿ ತೆಗೆದುಕೊಂಡು ಹೋಗಲು ಹೇಳಿದ್ದು ? ಅಷ್ಟು ಬೇಗ ಮರೆತಿರಾ ? ಬೇಕಾದರೆ ಚೀಲದಲ್ಲಿ ಹಾಕಿಬಿಡುತ್ತೇನೆ. ಅಂದಳು, ಅಷ್ಟು

" ವಸುಂಧರೆ "



ಹೇಳಿದ ಮೇಲೆ ಇಲ್ಲಿ ಹಾಕಿ ಹೋಗೆನ್ನಲು ಬಾಯಿ ಬಾರದೆ ಸರಿ ಸರಿ ಅಂತ ಸುಮ್ಮನಾಗಿಬಿಟ್ಟೆ." ಎಂದಳು ಸೀತಾಪತಿಯ ಹೆಂಡತಿ.

"ಹಾಗಾದರೆ ಗೊತ್ತಾಯಿತು. ಹೀಗೆಲ್ಲಾ ನೀನು ಕೊಟ್ಟ ಸಲಿಗೆಯಿಂದ ಬಾಯಿ ದಬಾಯಿಸಿ ಗೆಲ್ಲಬಹುದೆಂದು ಧೈರ್ಯ ಬಂತು ಅವಳಿಗೆ. ಅವಳ ಸಂಗತಿ ಮೊದಲೇ ಏಕೆ ನನಗೆ ಹೇಳಲಿಲ್ಲ?" ಎಂದು ಸೀತಾಪತಿ ಹೆಂಡತಿಯ ಹೆಡ್ಡುತನವನ್ನು ನಾನಾವಿಧವಾಗಿ ಹೇಳಿ ಹಂಗಿಸಿ ಬೈಯ ತೊಡಗಿದನು. ಮನೆಯೊಳಗೆಲ್ಲಾ ಅವನ ಕಂಠ ಪ್ರತಿಧ್ವನಿಸಿತು.

ಕಡೆಗೆ ಮಗನು ನಡುವೆ ಬಾಯಿಹಾಕಿ, "ಸುಮ್ಮನಿರಿ ಅಪ್ಪಾ, ಮುಖ್ಯ ಜಾಗ್ರತೆಯಲ್ಲಿ ನಾವಿರಬೇಕು. ಅಷ್ಟೇ" ಎಂದನು.

ಮಗನೇ ತನಗೆ ಬುದ್ಧಿ ಹೇಳುವಷ್ಟರ ಮಟ್ಟಿಗೆ ಬಂದುದನ್ನು ನೋಡಿ ಸೀತಾಪತಿಯ ಕೋಪ ಇನ್ನಷ್ಟು ತಾರಕಕ್ಕೇರಿತು. ತನ್ನ ಹೆಂಡತಿಗೂ ಮಗನಿಗೂ ಹಣದ ಬೆಲೆ ಸ್ವಲ್ಪವೂ ತಿಳಿಯದೆಂದು ಬೈದು ಕೂಗಾಡಿದನು. ಈ ಗಲಾಟೆ ಕೇಳಿ ನೆರೆಕರೆಯವರೆಲ್ಲಾ ಮನೆ ಮುಂದೆ ಗುಂಪುಗೂಡಿದರು. ನಡೆದ ಸಮಾಚಾರ ತಿಳಿದು ಕೆಲವರು ಸೀತಾಪತಿಯದು ತಪ್ಪು ಎಂದರು, ಮತ್ತೆ ಕೆಲವರು ಅವನ ಹೆಂಡತಿ ಮಗಂದಿರದೇ ತಪ್ಪೆಂದು ಬುದ್ಧಿ ಹೇಳಿದರು.

ಇಷ್ಟು ರಗಳೆಯಾದರೂ ಕಾಣದ ಹಣ ಏನಾಯಿತೆಂದು ತಿಳಿಯಲಿಲ್ಲ. ಮನೆಯವರ ಮೇಲೆ ರುಷ್ಟನಾದ ಸೀತಾಪತಿ ಮತ್ತೆ ಎರಡು ದಿನ ಮನೆಯಲ್ಲಿ ಊಟವೇ ಮಾಡಲಿಲ್ಲ. ಅವನ ಹೆಂಡತಿಗೂ ಊಟ ತಿಂಡಿಗಳಿಗೆ ಮನಸ್ಸು ಬಾರದೆ, ತನ್ನ ಕೊರಗನ್ನು ನಾಲ್ಕುಮಂದಿ ಅಮ್ಮ ಅಕ್ಕಂದಿರೊಂದಿಗೆ ಹೇಳಿಕೊಂಡು ದುಃಖಿಸಿದಳು. ಕ್ರಮವಾಗಿ ಇದೆಲ್ಲಾ ಮುಸುಕಿನೊಳಗೆ ಮುಸುಗಿಹೋಗಿ, ಸೀತಾಪತಿ ಎಂದಿನಂತೆ ಇರತೊಡಗಿದನು.

ಇಲ್ಲಿ ಹೀಗೆಲ್ಲಾ ಗಲಾಟೆ ನಡೆದಾಗ ಪಕ್ಕದ ಮನೆಯ ಸೋಮನಾಥನು ಊರೊಳಗೆ ಇರಲಿಲ್ಲ. ಮನೆಯಲ್ಲಿ ಅವನ ಹೆಂಡತಿ ಮಾತ್ರವೇ ಇದ್ದಳು. ಪಟ್ಟಣಕ್ಕೆ ಹೋಗಿದ್ದ ಸೋಮನಾಥನು ಒಂದು ವಾರದ ಮೇಲೆ ಮನೆಗೆ ಬಂದನು.

ಅವನು ಮನೆಗೆ ಬಂದ ಮರುದಿನವೇ ಅವನ ಮನೆಯಲ್ಲಿ ಹತ್ತು ಬೆಳ್ಳಿ ನಾಣ್ಯಗಳು ಕಾಣದೆ ಹೋದುವು. ಸೋಮನಾಥನು ಹೆಂಡತಿಯೊಂದಿಗೆ, "ನೀನೇನಾದರೂ ತೆಗೆದಿಯಾ?" ಎಂದು ಕೇಳಿದನು. ತನಗೊಂದೂ ಗೊತ್ತಿಲ್ಲವೆಂದಳು ಹೆಂಡತಿ. ಮಗನನ್ನು ಕೇಳಿದರೆ ಅವನೂ ಹಾಗೆಯೇ ಉತ್ತರ ಕೊಟ್ಟನು.

ಸೀತಾಪತಿಯ ಮನೆಯಲ್ಲಿ ಕಸಮುಸುರೆ ಮಾಡುವವಳೇ ಸೋಮನಾಥನ ಮನೆಯಲ್ಲಿಯೂ ಕೆಲಸ ಮಾಡುತ್ತಾಳೆ.

"ಆ ಕೆಲಸದವಳಿಗೆ ಕಳ್ಳಬುದ್ಧಿ ಇದೆಯೆಂದು ಸೀತಾಪತಿಯವರ ಮನೆಯಲ್ಲಿ ಹೇಳುತ್ತಾರೆ. ಇದು

ಕೂಡಾ ಅವಳಿಂದಲೇ ಆಗಿರಬೇಕು" ಎಂದಳು ಸೋಮನಾಥನ ಹೆಂಡತಿ.

"ನಮ್ಮಲ್ಲಿ ಅವಳು ಕಳ್ಳತನ ಮಾಡುವಾಗ ಎಂದಾದರೂ ನೀನು ನೋಡಿರುವಿಯಾ?" ಎಂದು ಸೋಮನಾಥನು ಕೇಳಿದನು. ಹೆಂಡತಿ ಇಲ್ಲವೆಂದಳು.

"ನಾನೊಂದು ಹೇಳುತ್ತೇನೆ ಕೇಳು. ಕೆಲಸದಾಳುಗಳನ್ನು ಸ್ವಲ್ಪ ದಯೆಯಿಂದ ನೋಡಿಕೊಳ್ಳುತ್ತ, ಅಗತ್ಯ ಬಿದ್ದಾಗ ಅವರಿಗಿಷ್ಟು ಸಹಾಯ ಕೂಡಾ ಮಾಡುವವರ ಮನೆಯಲ್ಲಿ ಅವರಿಂದ ಕಳ್ಳತನವಾಗಲಾರದು. ಹೆಚ್ಚು ಹೆಚ್ಚು ಕೆಲಸಮಾಡಿಸಿಕೊಂಡು, ಕಡಿಮೆ ಸಂಬಳ ಕೊಡುವವರ ಮನೆಯಲ್ಲಿ ಕೆಲಸದಾಳುಗಳು ಮೊಂಡರಾಗಿರುತ್ತಾರೆ. ಬಹುಶಃ ನಾನೇ ತಪ್ಪು ಲೆಕ್ಕ ಮಾಡಿಕೊಂಡು ಹಣ ಕಾಣೆಯಾಯಿತೆಂದು ನಿಮ್ಮನ್ನೆಲ್ಲಾ ಕೇಳಿದೆ. ನೀವಾರೂ ತೆಗೆದಿಲ್ಲವೆಂದಿರಿ, ಮುಗಿಯಿತು." ಎಂದನು ಸೋಮನಾಥ.

"ಹೀಗೆ ಸುಮ್ಮನಿದ್ದರೆ ಹೇಗೆಂತ? ಕೆಲಸದವಳನ್ನು ಕರೆದು ಸ್ಪಷ್ಟವಾಗಿ ಕೇಳಲೇಬೇಕು. ಸುಮ್ಮನಿದ್ದರೆ ಹೇಗೆ?" ಎಂದಳು ಸೋಮನಾಥನ ಹೆಂಡತಿ.

ಸೋಮನಾಥನು ಬೇಸರದಿಂದ, "ಇಷ್ಟರವರೆಗೂ ನಮ್ಮ ಮನೆಯಲ್ಲಿ ಕಳ್ಳತನ ನಡೆದಿತ್ತೇ? ಇಲ್ಲ. ಈಗಲೂ ನಡೆದಿರಲಿಕ್ಕಿಲ್ಲವೆಂದೇ ತಿಳಿಯೋಣ. ಒಂದುವೇಳೆ ನಡೆದಿದ್ದರೂ ಅದು ನಮ್ಮ ಅಶ್ರದ್ಧೆಯಿಂದಲೇ ನಡೆದಿದ್ದೀತು. ಇನ್ನು ಮೇಲೆ ನಾವು ತಕ್ಕ ಜಾಗ್ರತೆಯಲ್ಲಿದ್ದರೆ ಸರಿ" ಎಂದನು ಸೋಮನಾಥ.

ಸೋಮನಾಥನ ಹೆಂಡತಿಗೆ ಗಂಡನ ಆಲೋಚನೆ ಹಿಡಿಸಲಿಲ್ಲ. "ಒಂದುಸಾರಿ ಅವಳನ್ನು ಕರೆದು ಕೇಳಿಬಿಟ್ಟರೆ ತಪ್ಪೇನಿದೆ?" ಎಂದಳು.

"ನಿಜಕ್ಕೂ ಅವಳು ಕಳ್ಳತನಮಾಡಿಲ್ಲವಾದರೆ, ಅವಳಿಗೆ ಸಂಕಟವಾದೀತು. ಕೋಪವೂ ಬಂದೀತು. ಎಷ್ಟು ನಂಬಿಕೆಯಿಂದ ಕೆಲಸ ಮಾಡಿದರೂ ಯಜಮಾನರು ನಂಬುವುದಿಲ್ಲವೆಂಬ ರೋಷದಲ್ಲಿ ನಿಜಕ್ಕೂ ಕಳ್ಳತನಕ್ಕೆ ಪ್ರಾರಂಭಿಸಲೂ ಬಹುದು. ಅದಕ್ಕೇ ನಮ್ಮ ಜಾಗ್ರತೆಯಲ್ಲಿ ನಾವಿರಬೇಕು ಅಂದೆನು" ಎಂದನು ಸೋಮನಾಥ.



ಆದರೂ ಅವನ ಹೆಂಡತಿ ಹಟ ಬಿಡದೆ, ಗಂಡ ನನ್ನು ನಿಂದಿಸುತ್ತ "ನೀವು ಯಾವಾಗಲೂ ಹೀಗೇನೇ! ಹತ್ತು ನಾಣ್ಯ ಕಾಣದಿರುವಾಗ ನಿಮಗೆ ಇರುವೆ ಕಚ್ಚಿದ ಹಾಗೂ ಇಲ್ಲ, ನಾಲ್ಕು ನಾಣ್ಯ ಕಾಣೆ ಯಾದುದಕ್ಕೇ ನಮ್ಮ ಪಕ್ಕದ ಮನೆ ಸೀತಾಪತಿ ಯವರು ದೊಡ್ಡ ರಾದ್ಧಾಂತಮಾಡಿದ್ದಾರೆ ಗೊತ್ತಾ! ಯಜಮಾನರು ಅಂದರೆ ಹಾಗಿರಬೇಕು" ಎಂದಳು.

"ಹಾಗೇನು! ಬಾ, ಸೀತಾಪತಿಯ ಮನೆಗೆ ಹೋಗೋಣ" ಎಂದು ಹೆಂಡತಿಯನ್ನು ಕರೆದುಕೊಂಡು ಸೀತಾಪತಿಯ ಮನೆಗೆ ಹೋದನು ಸೋಮನಾಥ.

ಆ ಸಮಯದಲ್ಲಿ ಮನೆಯಲ್ಲೇ ಇದ್ದ ಸೀತಾಪತಿ, ಸೋಮನಾಥನಿಗೆ ಆದರದ ಸ್ವಾಗತ ಹೇಳಿ, ಬಂದ ವಿಶೇಷವೇನೆಂದು ಕೇಳಿದನು.

"ಮತ್ತೇನಿಲ್ಲ. ಮೊನ್ನೆ ನಿಮ್ಮ ಮನೆಯಲ್ಲಿ ನಾಲ್ಕು ಬೆಳ್ಳಿ ನಾಣ್ಯ ಕಾಣೆಯಾಗಿ ಭಾರಿ ಗಲಾಟೆಯಾಯಿ ತೆಂದು ಕೇಳಿದೆ. ಅದೇನು ಸಂಗತಿ ತಿಳಿಯುವಾ ಅಂತ ಬಂದೆ. ಆಗ ನಾನು ಊರಲ್ಲಿರಲಿಲ್ಲ," ಎಂದನು ಸೋಮನಾಥ.

"ಹೌದು ಹೌದು. ಸುಮ್ಮನೆ ಬಿಟ್ಟರೆ ಹೇಗೆ? ನನ್ನಾಕೆಯನ್ನೂ, ಮಗನನ್ನೂ ಚೆನ್ನಾಗಿ ಬೈದುಬಿಟ್ಟೆ. ಊರೆಲ್ಲಾ ನಡುಗುವ ಹಾಗೆ ಮಾಡಿಬಿಟ್ಟೆ. ಆದರೂ ಮನೆಯೊಳಗಿನವರಿಗೆ ಬುದ್ಧಿ ಬರಲಿಲ್ಲ." ಎಂದನು, ತಾನು ಬಹಳ ಒಳ್ಳೇ ಕೆಲಸಮಾಡಿದೆನೆಂಬ ಹೆಮ್ಮೆಯಿಂದ ಸೋಮನಾಥನನ್ನು ನೋಡುತ್ತ.

"ಅದುಸರಿ, ಹೋದ ಹಣ ಸಿಕ್ಕಿತೇನು?" ಎಂದು ಕೇಳಿದನು ಸೋಮನಾಥ.

"ಇಲ್ಲ. ಅದೇ ನೋಡಿ ಆಶ್ಚರ್ಯ!" ಎಂದನು ಸೀತಾಪತಿ.

"ಓಹೋ! ಆ ಹೋದ ಹಣ ಸಿಕ್ಕಿದಾಗ ನನಗೂ ಹೇಳಿರಿ. ಆಗ ನಾನು ಕೂಡಾ ಊರೆಲ್ಲಾ ಹೆದರಿ ನಡುಗುವ ಹಾಗೆ ಗಲಾಟೆ ಮಾಡುತ್ತೇನೆ. ನನ್ನ ಮನೆಯಲ್ಲೂ ಸಹ ಹತ್ತು ನಾಣ್ಯ ಕಾಣೆಯಾಗಿದೆ. ನಿಮ್ಮ ಹಾಗೆ ಸಿಕ್ಕುವ ಮೊದಲೇ ಗಲಾಟೆ ಮಾಡ ಬಾರದು ಅಂತ ಮುಂದಾಗಿ ನಿಮಗೆ ತಿಳಿಸಿದೆ" ಎಂದು ಹೇಳಿ ಸೋಮನಾಥನು ಹೆಂಡತಿಯನ್ನು ಕರೆದುಕೊಂಡು ತನ್ನ ಮನೆಗೆ ಹೋಗಿಬಿಟ್ಟನು.

ಈ ಸಂಭಾಷಣೆ ಕೇಳಿಕೊಂಡಿದ್ದ ಸೋಮನಾಥನ ಹೆಂಡತಿಗೆ ಒಂದು ವಿಷಯ ಅರ್ಥವಾಯಿತು. ಯಾವ ಸಮಸ್ಯೆಯಾದರೂ ಕೋಪತಾಪಗಳಿಂದ ಗಲಾಟೆ ಯೆಬ್ಬಿಸಿದ ಮಾತ್ರಕ್ಕೆ ಪರಿಹಾರವಾಗದೆಂದು, ಅದಕ್ಕೆ ಬೇರೆ ಉಪಾಯ ನೋಡಿಕೊಳ್ಳಬೇಕೆಂದು ತಿಳಿದಳು. ಆಮೇಲೆ ಅವಳ ಮನೆಯಲ್ಲಿ ಕಳ್ಳತನವೇನೂ ನಡೆಯಲಿಲ್ಲ, ಸೀತಾಪತಿಯ ಮನೆಯಲ್ಲಿ ಮಾತ್ರ ಆಗಾಗ ಏನೋ ಗಲಾಟೆ ನಡೆಯುತ್ತಲೇ ಇದ್ದಿತು.








೪

[ಸುಬಾಹು ಭಿಕ್ಷುಕನ ಹಾಗೆ ನಟಿಸಿ ಸರ್ಪಕೇತು ಸೈನಿಕರಿಂದ ತಪ್ಪಿಸಿಕೊಂಡನು. ಸರ್ಪಕೇತುವಿನ ಕಡೆಯವರು ಮಾಯೋಪಾಯದಿಂದ, ವೀರಪುರ ಪಟ್ಟಣದ ಬಾಗಿಲುಗಳನ್ನು ತೆರೆಯಿಸಿ ಒಳಗೆ ಪ್ರವೇಶಿಸಿದರು. ಬರಲಿರುವ ಅಪಾಯವನ್ನು ತನ್ನ ಒಡೆಯನೊಂದಿಗೆ ಆದಷ್ಟು ಬೇಗನೆ ಹೇಳಲು ಸುಬಾಹು ಎಲ್ಲರನ್ನೂ ತಪ್ಪಿಸಿಕೊಂಡು ಓಡತೊಡಗಿದನು...
—ಇನ್ನು ಓದಿರಿ]

ಹಾಗೆ ಒಬ್ಬನು ತಮ್ಮನ್ನು ಮೀರಿಕೊಂಡು ತನ್ನಿಷ್ಟ ಬಂದ ಹಾಗೆ ಅದೆಲ್ಲಿಗೆ ಓಡುತ್ತಾನೆ? ಹಾಗೆಲ್ಲಾ ಓಡಲು ಬಿಡಬಾರದೆಂದು ಕೆಲವು ಸೈನಿಕರು ನಿಲ್ಲು ನಿಲ್ಲೆಂದು ಕೂಗುತ್ತ ಸುಬಾಹುವಿನ ಬೆನ್ನು ಹತ್ತಿದರು. ತಾನು ಯಾರಿಗೂ ತಿಳಿಯದಂತೆ ಓಡುವೆನೆಂದು ಕೊಂಡ ಸುಬಾಹುವಿಗೆ, ತನ್ನನ್ನು ಬೆಂಬತ್ತಿ ಕೆಲವು ಸೈನಿಕರು ಓಡಿಬರುತ್ತಿರುವಂತೆ ಅವರ ಕಾಲ್ಸಪ್ಪಳ ದಿಂದಲೇ ಗೊತ್ತಾಯಿತು. ಆದರೆ ನಿಂತು ಹಿಂದಿರುಗಿ ನೋಡಲಿಕ್ಕೆ ಕೂಡಾ ಸುಬಾಹುವಿಗೆ ವ್ಯವಧಿ ಇಲ್ಲ, ಕ್ಷಣಕಾಲವೂ ಅಮೂಲ್ಯವಾದುದಾಗಿತ್ತು. ಎಷ್ಟು ಬೇಗನೇ ರಾಜಪ್ರಾಸಾದದೊಳಗೆ ಕಾಲಿಡುವೆನೋ, ಎಷ್ಟು ಬೇಗ ಚಿಕ್ಕ ಪ್ರಭುವನ್ನು ನೋಡುವೆನೋ ಎಂಬ ಒಂದೇ ಒಂದು ಅವಸರದ ಕಾತರ ಅವನಿಗೆ ಆಗ ಇದ್ದಿತು.

ಅವನನ್ನು ಓಡಿಸಿಕೊಂಡು ಬರುವವರ ಕೇಕೇ ಗಳೂ, ಚಪ್ಪಾಳೆಗಳೂ, "ನಿಲ್ಲು ನಿಲ್ಲೋ, ದ್ರೋಹೀ! ಘಾತುಕಾ!" ಎಂಬ ಕೂಗುಗಳೂ ಹತ್ತಿರ ಹತ್ತಿರ ವಾಗುತ್ತಿದ್ದುವು. ಅಷ್ಟರಲ್ಲಿ ಸುಬಾಹು ರಾಜ ಪ್ರಾಸಾದದ ಮುಂದಿದ್ದ ಜಲಯಂತ್ರದ ಮರೆ ಯಿಂದಾಗಿ ಮುಂದೆ ಓಡಿ, ಪ್ರಾಸಾದದ ದ್ವಾರದ



ಕಾವಲುಗಾರರನ್ನುದ್ದೇಶಿಸಿ, "ನಾನು ಸುಬಾಹು. ದಾರಿಬಿಡಿರಿ. ನನ್ನನ್ನು ಓಡಿಸಿಕೊಂಡು ಬರುವವರು ಸರ್ಪಕೇತುವಿನ ಸೈನಿಕರು. ಅವರು ಸುಳ್ಳು ಜಯ ಘೋಷ ಮಾಡುತ್ತಾರೆ! ನಂಬಬೇಡಿರಿ! ಅವರನ್ನು ತಡೆಯಿರಿ. ನಮ್ಮ ಭಟರೆಲ್ಲರನ್ನೂ ಎಚ್ಚರಿಸಿರಿ! ಬಾಗಿಲು ಮುಚ್ಚಿರಿ! ಬೇಗ ಬೇಗ! ಪ್ರಭುವಿಗೆ ಸುದ್ದಿ ಮುಟ್ಟಿಸಿರಿ!" ಎಂದನು. ಮರುಕ್ಷಣದಲ್ಲಿ ತೆರೆದ ಬಾಗಿಲಿನೆಡೆಯಿಂದಾಗಿ ಛಂಗನೆ ಪ್ರಾಸಾದ ದೊಳಗೆ ಪ್ರವೇಶ ಮಾಡಿದನು ಸುಬಾಹು.

ಒಂದೇ ಸಮನೆ ಓಡುತ್ತ ಸುಬಾಹು ಚಂದ್ರ ವರ್ಮನಿರುವ ಅರಮನೆಯ ಮಾಳಿಗೆಯ ಮೆಟ್ಟ ಲೇರುತ್ತ ದೊಡ್ಡ ಕಂಠದಿಂದ, "ಓ! ಯುವ ರಾಜಾ! ಘೋರವಾದ ಅಪಾಯ! ಸರ್ಪಕೇತು ವಿನ ಸೈನಿಕರು ಬಹು ದೊಡ್ಡ ಮೋಸದಿಂದ ಪಟ್ಟಣ ದೊಳಗೆ ಹೊಕ್ಕಿದ್ದಾರೆ!" ಎಂದು ಬಾರಿ ಬಾರಿಗೂ ಕೂಗುತ್ತಿದ್ದನು.

ಅವನ ಕೂಗಿನಿಂದಾಗಿ ಅಲ್ಲಲ್ಲಿದ್ದವರೆಲ್ಲ ಗಡಬಡಿಸಿ ಕೊಂಡಿರಲು, ನಿದ್ದೆಯಲ್ಲಿದ್ದ ಚಂದ್ರವರ್ಮನು ಅದೇನು ಕೊಂಪೆ ಮುಳುಗಿತೋ ಎಂದು ಗಾಬರಿ ಯಾಗಿ ಗಡಿಬಿಡಿಯಿಂದೆದ್ದು ಶಯ್ಯಾಗಾರದಿಂದ ಹೊರಗೆ ಬಂದನು. ಅಲ್ಲಿಯೇ ಅವನಿಗೆ ಅರಮನೆ ಪಠಾರದ ಮುಂದಿರುವ ರಾಜಮಾರ್ಗದಲ್ಲಿ ದೊಡ್ಡ ಅಲ್ಲೋಲಕಲ್ಲೋಲವಾಗುವ ಶಬ್ದ ಕೇಳತೊಡಗಿತು.

ಅವನು ಆಶ್ಚರ್ಯಪಡುತ್ತ ಮಾಳಿಗೆಯ ಮೇಲೆ ಓಡಿ ಕೈಗೋಡೆಯ ಬದಿಯಲ್ಲಿ ನಿಂತು ಆ ಕಲಕಲ ರವಗಳ ಕಡೆಗೆ ನೋಡಿದನು. ಸುಬಾಹು ಓಡುತ್ತಾ ಎಗರುತ್ತಾ, ತೇಕುತ್ತಾ, ಬಿದ್ದೆದ್ದುಕೊಂಡು ಅಲ್ಲಿಗೇ ಓಡಿ ಬಂದನು.

"ಯುವರಾಜಾ! ಸರ್ಪಕೇತುವಿನ ಸೈನಿಕರು ಮೋಸಮಾಡಿ ಪಟ್ಟಣದ ದ್ವಾರ ತೆರೆಯಿಸಿ ಒಳಗೆ ಪ್ರವೇಶಿಸಿದ್ದಾರೆ. ನಮ್ಮ ಎಲ್ಲಾ ಭಟರಿಗೂ ಎಚ್ಚರಿಕೆ ಕೊಡಿರಿ! ನಾನು ಎಚ್ಚರಿಕೆ ಕೊಡುತ್ತಾ, ಓಡಿ ಬಂದಿದ್ದೇನೆ. ಆದರೂ ಶತ್ರು ಸೈನಿಕರು ಬಹಳ ಮಂದಿ ಇಷ್ಟರಲ್ಲಿ ಪ್ರಾಸಾದದ ಹತ್ತಿರವೇ ಬಂದಿರ ಬಹುದು" ಎಂದನು.

ಅದನ್ನು ಕೇಳಿ ಚಂದ್ರವರ್ಮನು ಕ್ಷಣ ಮಾತ್ರ ನಿಶ್ಚೇಷ್ಟಿತನಾದನು. ಅಷ್ಟರಲ್ಲಿ ರಾಜಮಾರ್ಗಗಳ ಇಕ್ಕಡೆಗಳಲ್ಲಿಯೂ ಇರುವ ಮನೆಗಳ ಕಡೆಯ ಆಕಾಶವು ಪಕ್ಕನೆ ಕೆಂಪಾಗಿ ಹೋಗಿ ಕಾಣಬಂದಿತು. ದೊಡ್ಡ ಬೆಂಕಿಯ ಉರಿ ಕಾಣತೊಡಗಿತು. ಕುದುರೆ ಗಳ ಹೇಷಾರವಗಳೂ, ಸೈನಿಕರ ಘೋಷಣಗಳೂ, ಮನೆಯೊಳಗಿನವರ ಆರ್ತನಾದಗಳೂ ಹೆಚ್ಚು ಹೆಚ್ಚಾಗುತ್ತಾ, ಹೋದುವು. ಆಕಾಶವೆಲ್ಲಾ ಶಬ್ದ ಮಯವಾಯಿತು. ಕಣ್ಣು ಕಿವಿಗಳ ಅನುಭವಗಳಿಂದ ಹೃದಯ ಧಡಧಡಿಸಿತು.

ಚಂದ್ರವರ್ಮನು ಸುಬಾಹುವನ್ನು ನೋಡಿ, "ನಮ್ಮ ತಂದೆ ಎಲ್ಲಿದ್ದಾರೆ? ಅವರೊಂದಿಗೆ ನೀನು



ಯಶೋವರ್ಧನ ಮಹಾರಾಜರ ಬಳಿಗೆ ಹೋದೆಯಲ್ಲಾ? ಇದೆಲ್ಲಾ ತಂದೆಯವರಿಗೆ ಗೊತ್ತಿಲ್ಲವೇ? ತಂದೆ ಏನು ಮಾಡುತ್ತಿದ್ದಾರೆ?" ಎಂದನು ಆತುರದಿಂದ.

ಸುಬಾಹು ಆ ಪ್ರಶ್ನೆಗೆ ಉತ್ತರ ಕೊಡಲು ಸಾಧ್ಯವಾಗದೆ ಪಿಳಿಪಿಳಿ ನೋಡಿದನು. ಬಾಯಿ ಬಿದ್ದುಹೋದಂತೆ ಗಂಟಲು ಕಟ್ಟಿಬಂದಿತು. ಇಂತಹ ವಿಪತ್ಕರ ಪರಿಸ್ಥಿತಿಯಲ್ಲಿ ಸೂರ್ಯವರ್ಮನ ದುರ್ಮರಣವನ್ನು ಚಂದ್ರವರ್ಮನೊಂದಿಗೆ ಹೇಳುವುದು ಒಳ್ಳೆಯದಲ್ಲವೆಂದು ಮಿಂಚಿನಂತೆ ಹೊಳೆಯಿತು. ತಂದೆಯ ಮರಣ ವಾರ್ತೆಯಿಂದ ಮಗನ ಬುದ್ಧಿ ಕುಂದಿಹೋಗಬಹುದು. ಸ್ಥೈರ್ಯ ನಡುಗಬಹುದು. ಈಗ ಮೊದಲು ದ್ರೋಹ ಬುದ್ಧಿಯಿಂದ ಪಟ್ಟಣದೊಳಗೆ ಪ್ರವೇಶಿಸಿದ ಸರ್ಪಕೇತುವಿನ ಅನುಚರರನ್ನು ಹತಮಾಡಬೇಕಾದುದು ಮುಖ್ಯ. ಆಮೇಲೆ ಅವಕಾಶ ನೋಡಿ ಉಳಿದೆಲ್ಲ ವಿಷಯ ಹೇಳುವುದೇ ಒಳ್ಳೆಯದು.

ಹೀಗೆಂದುಕೊಂಡು ಸುಬಾಹು, "ಯುವರಾಜಾ! ತಂದೆಯವರು ವೀರಪುರದ ದಾರಿಯಲ್ಲಿದ್ದಾರೆ. ಅವರಿಗೆ ಎಲ್ಲಾ ಗೊತ್ತಿದೆ. ಆದಕ್ಕೇ ನನ್ನನ್ನು ಮುಂದಾಗಿ ಕಳುಹಿಸಿದವರು ಅವರೇ. ತತ್‌ಕ್ಷಣ ಮಾಡಬೇಕಾದ ಕರ್ತವ್ಯವನ್ನು ನೋಡಿರಿ ಪ್ರಭೂ. ಈಗಾಗಲೇ ಒಳಗೆ ನುಗ್ಗಿದ ಸರ್ಪಕೇತುವಿನ ಸೈನಿಕರು ಪಟ್ಟಣದೊಳಗೆ ಸ್ವೇಚ್ಛೆಯಾಗಿ ತಿರುಗುತ್ತ ಮನೆಗಳಿಗೆ ಬೆಂಕಿ ಹಚ್ಚುತ್ತಿದ್ದಾರೆ. ಯಾವ ನಿಮಿಷದಲ್ಲಿಯೂ ಅವರು ಅರಮನೆಯೊಳಗೆ ಪ್ರವೇಶಿಸಬಹುದು" ಎಂದನು ಸುಬಾಹು, ಬರುವ ದುಃಖವನ್ನು ಬಹು ಕಷ್ಟದಿಂದ ನುಂಗಿಕೊಳ್ಳುತ್ತ.

ಅಷ್ಟರಲ್ಲಿ ಮಾಳಿಗೆ ಮೆಟ್ಟಲಿನ ಮೇಲೆ ಗಲಾಟೆಯಾಗುವುದು ಕೇಳಿಸಿತು. ಅವರು ಶತ್ರು ಸೈನಿಕರೆಂಬ ಅನುಮಾನವು ಸುಬಾಹುವಿಗಾಯಿತು. ಕೂಡಲೇ ಅವನು ಒಂದೇ ಹಾರಿಕೆಗೆ ಚಂದ್ರವರ್ಮನ ಶಯ್ಯಾಗಾರದೊಳಗೆ ನುಗ್ಗಿ, ಅಲ್ಲಿ ಗೋಡೆಯಲ್ಲಿದ್ದ ಎರಡು ಕತ್ತಿಗಳನ್ನು ಎತ್ತಿಕೊಂಡು ಹೊರಗೆ ಬಂದು, ಒಂದು ಕತ್ತಿಯನ್ನು ಚಂದ್ರವರ್ಮನಿಗೆ ಕೊಟ್ಟನು. ಚಂದ್ರವರ್ಮನು ಕೂಡಲೇ ಬಿಚ್ಚುಗತ್ತಿಯನ್ನು ಸುಳಿಸುತ್ತ ಮೆಟ್ಟಲಿನ ಕಡೆಗೆ ತಿರುಗಿದನು.

ಆಗ ಮೆಟ್ಟಲ ಮೇಲಿನಿಂದ, "ಯುವರಾಜಾ! ಯುವರಾಜಾ!" ಎಂಬ ಗಂಭೀರ ಧ್ವನಿಯ ಕೂಗು ಕೇಳಿಸಿತು.

ಆ ಕಂಠಸ್ವರದ ಗುರುತು ಹಿಡಿದ ಚಂದ್ರವರ್ಮನು, "ಯಾರದು? ನೀನೇನಾ ಸೇನಾಧಿಪತೀ! ಏನಾಯಿತು?" ಎಂದು ಮರುಕೂಗು ಹಾಕಿದನು.

ವೀರಪುರದ ಸೇನಾನಿಯಾದ ಧೀರಮಲ್ಲನು ಚಂದ್ರವರ್ಮನ ಬಳಿಗೆ ಓಡೋಡುತ್ತಾ ಬಂದು, "ಯುವರಾಜಾ! ದೊಡ್ಡ ಅಪಾಯ ಹೊತ್ತಿಕೊಂಡು



ಬರುತ್ತಾ ಇದೆ. ಯಶೋವರ್ಧನ ಮಹಾರಾಜನು ಆದೇಕೆ ನಮ್ಮ ಮೇಲೆ ಕತ್ತಿ ಕಟ್ಟಿದ್ದಾನೋ, ಅಲ್ಲೇ ನಾಯಿತೋ ಒಂದೂ ಗೊತ್ತಾಗಿಲ್ಲ. ಆತನು ಕಳುಹಿಸಿದ ಸೈನಿಕರು ಪಟ್ಟಣದ ಮೇಲೆ ಬಿದ್ದು ಕಂಡಕಂಡ ಮನೆಗಳಿಗೆಲ್ಲಾ ನುಗ್ಗಿ ದೋಚಿಕೊಂಡು ಬೆಂಕಿ ಬೇರೆ ಹಚ್ಚುತ್ತಿದ್ದಾರೆ. ಕೆಲವು ಪಟ್ಟಣದೊಳಗಿನ ಪ್ರಜೆಗಳೂ ಸಹಾ ಆ ಸೈನಿಕರೊಂದಿಗೆ ಸೇರಿದ್ದಾರೆ, ಕಾರಣವೇನೆಂಬುದೊಂದೂ ಗೊತ್ತಾಗಿಲ್ಲ. ತಿಳಿಯುವ ಅವಕಾಶವೂ ಇಲ್ಲ. ಯಶೋವರ್ಧನ ಮಹಾರಾಜರಿಗೆ ಇಂಥಾ ದುರ್ಬುದ್ಧಿ ಹುಟ್ಟಿತೆಂದರೆ ನಂಬಲಿಕ್ಕೇ ಆಗುವುದಿಲ್ಲ!" ಎಂದನು.

ಯಶೋವರ್ಧನ ಮಹಾರಾಜನ ಸೈನಿಕರು ಎಂಬ ಮಾತನ್ನು ಕೇಳಿದ ಕೂಡಲೇ ಚಂದ್ರವರ್ಮನು ಮಹಾ ಕೋಪದಿಂದ ನಡುಗಿ, "ಸೇನಾನೀ!..." ಎಂದು ಏನೋ ಹೇಳಲಿರುವ ಸುಬಾಹು, "ಯುವರಾಜಾ, ಇಲ್ಲಿ ಕೇಳಿರಿ! ಯಶೋವರ್ಧನರಿಗೆ ಇದಾವುದೂ ತಿಳಿಯದು" ಎಂದು ಕೂಗಿದನು. ಚಂದ್ರವರ್ಮನು ದೊಡ್ಡ ಕಣ್ಣುಗಳಿಂದ ಅವನನ್ನು ನೋಡಿದನು.

"ಯುವರಾಜಾ! ಆ ಸೈನಿಕರು ಯಶೋವರ್ಧನ ಮಹಾರಾಜನ ಕಡೆಯವರಲ್ಲವೇ ಅಲ್ಲ. ಅವರು ಠಕ್ಕಿನ ಜಯಘೋಷ ಮಾಡುತ್ತಿದ್ದಾರೆ. ನಮ್ಮ ಪಟ್ಟಣದೊಳಗೆ ಪ್ರವೇಶಿಸಿ, ವೀರಪುರವನ್ನು ವಶಪಡಿಸಿಕೊಳ್ಳಲು ಸರ್ಪಕೇತು ಮಾಡಿದ ಘೋರವಾದ ಕುಯುಕ್ತಿ ಇದೆಲ್ಲಾ. ನಾನು ಮಾರುವೇಷದಲ್ಲಿ ಅವರೊಂದಿಗೇ ಪಟ್ಟಣ ಪ್ರವೇಶ ಮಾಡಿದ್ದೇನೆ. ಪುರಜನರ ವೇಷದಲ್ಲಿದ್ದು ಸೈನಿಕರಿಗೆ ಸಹಾಯ ಮಾಡುವವರು ನಮ್ಮ ಪಟ್ಟಣವಾಸಿಗಳೂ ಅಲ್ಲ. ಅವರೆಲ್ಲಾ ನಮ್ಮ ಸಂಸ್ಥಾನದ ಎಲ್ಲೆಯಲ್ಲಿರುವ ಹಳ್ಳಿಗಾಡಿನ ಸಾಮಾನ್ಯ ಜನರು. ಕೇವಲ ಮೂರ ಟಾಳುಗಳು. ಕುಡುಕರು. ಹಣ ದೋಚಿಕೊಳ್ಳಬಹುದೆಂಬ ಆಶೆ ಹಚ್ಚಿ ಆ ಬಡಪಾಯಿಗಳನ್ನು ಇಲ್ಲಿಗೆ ಹೀಗೆ ಕರೆದು ತಂದಿದ್ದಾರೆ!" ಎಂದನು.

ಆ ಮಾತುಗಳನ್ನು ಕೇಳಿದ ಕೂಡಲೇ, ಸೇನಾಧಿಪತಿ ಧೀರಮಲ್ಲನು ನಿಶ್ಚೇಷ್ಟಿತನಾದನು. ಆಮೇಲೆ ಅವನು ಚಂದ್ರವರ್ಮನನ್ನು ನೋಡಿ, "ಇದ್ದೀತು! ಸುಬಾಹು ಹೇಳುವುದೇ ನಿಜವಾಗಿರಬೇಕು. ಇಂತಹ ಕುಟಿಲ ಪದ್ಧತಿಗಳಲ್ಲೆಲ್ಲಾ ಸರ್ಪಕೇತು ಬಹಳ ಗಟ್ಟಿಗನೇ. ಮಾಹಿಷ್ಮತೀ ನಗರಕ್ಕೆ ಹೋದ ನಮ್ಮ ಮಹಾರಾಜರಿಗೆ ಕೂಡಾ ಅವನಿಂದ ಏನಾದರೂ ಅಪಾಯ ಬರಬಹುದು. ಅವರೊಂದಿಗೆ ಹೋದ ಸುಬಾಹು ಮಾತ್ರ ಹೇಗೆ ಬಂದನು? ನಮ್ಮ ಮಹಾರಾಜರು ಎಲ್ಲಿದ್ದಾರೆ? ಏನು ಮಾಡುತ್ತಿದ್ದಾರೆ?" ಎನ್ನುತ್ತ ಸುಬಾಹುವನ್ನು ನೋಡಿದನು.

"ಅಯ್ಯಾ, ಈ ಪ್ರಶ್ನೆಗಳಿಗೆಲ್ಲ ಇದು ಸಮಯವಲ್ಲ. ಈಗ ಓಡಿಬರುವ ಅಪಾಯವನ್ನು ಕುರಿತು ಬೇಗನೇ ಆಲೋಚಿಸಬೇಕು. ಸೇನಾನೀ! ನಮ್ಮ

ಎಲ್ಲಾ ಭಟರನ್ನೂ ತ್ವರೆಗೊಳಿಸಿ, ಪಟ್ಟಣದೊಳಗೆ ನುಗ್ಗಿದ ಶತ್ರುಗಳನ್ನು ಮೊದಲು ಹೊರಗೆ ಓಡಿಸಬೇಕು. ಬೇಗ ಆ ಕೆಲಸವಾಗಲಿ! ಹೊತ್ತು ಕಳೆದಷ್ಟೂ ಅಪಾಯ ಹೆಚ್ಚು!" ಎಂದು ಸುಬಾಹು ಚಂದ್ರವರ್ಮನನ್ನು ನೋಡಿದನು.

ಹೌದು ಹೌದೆಂದು ಚಂದ್ರವರ್ಮನು ಸೇನಾಧಿಪತಿಯನ್ನು ನೋಡಿ, "ಸೇನಾನೀ, ರಾಜಪ್ರಾಸಾದದ ರಕ್ಷಣೆ ಹೇಗಿದೆ? ಸೈನಿಕರನ್ನು ಎಚ್ಚರಿಸಿದೆಯಾ? ಏನು ಏರ್ಪಾಡು ಮಾಡಿ ಬಂದಿರುವಿ?" ಎಂದು ಆತುರದಿಂದ ಕೇಳಿದನು.



"ಅದೆಲ್ಲಾ ಎಚ್ಚರಿಸಿ ಬಂದಿದ್ದೇನೆ. ಯಶೋವರ್ಧನ ಮಹಾರಾಜರಿಗೆ ಜಯಜಯವೆನ್ನುತ್ತ, ಕೆಲವು ಆಯುಧಧಾರಿಗಳು ಕಾವಲುಭಟರನ್ನು ತಪ್ಪಿಸಿಕೊಂಡು ಭವನದ ಪ್ರಾಂಗಣದೊಳಗೆ ಪ್ರವೇಶ ಮಾಡಿಬಿಟ್ಟರು. ಆ ಕೂಡಲೇ ನಮ್ಮ ಭಟರು ಅವರನ್ನು ಇದಿರಿಸಿ ಹತಮಾಡಿಬಿಟ್ಟಿದ್ದಾರೆ. ಆ ಬರುವವರು ಸರ್ಪಕೇತುವಿನ ಕಡೆಯವರೆಂದು ಸುಬಾಹು ಮೊದಲೇ ಹೇಳಿದ್ದರಿಂದಲೇ ಹಾಗಾಯಿತೆಂದು ಈಗ ಗೊತ್ತಾಯಿತು. ಭಲೇ ಸುಬಾಹೂ!" ಎಂದನು ಧೀರಮಲ್ಲ.

"ಹಾಗಾದರೆ, ಈಗ ನಮ್ಮ ಎಲ್ಲಾ ಭಟರೂ ಸಿದ್ಧರಾಗಲಿ. ಇಲ್ಲಿಯ ಕಾವಲಿಗೆ ಹೆಚ್ಚು ಮಂದಿ ಭಟರು ಬೇಕಾಗಿಲ್ಲ. ಹೆಚ್ಚಿನ ಸೈನಿಕರೊಂದಿಗೆ ಪಟ್ಟಣದೊಳಗೆ ಪ್ರವೇಶಿಸಿ ಆ ದುಷ್ಟ ಸರ್ಪಕೇತುವಿನ ಸೈನಿಕರನ್ನು ಚೆನ್ನಾಗಿ ಬೇಟೆಯಾಡಿಸು" ಎಂದನು ಚಂದ್ರವರ್ಮ.

"ಭಟರೆಲ್ಲರನ್ನೂ ಆಗಲೇ ಸಿದ್ಧಪಡಿಸಿದ್ದೇನೆ. ಯುವರಾಜಾ! ಯಶೋವರ್ಧನ ಮಹಾರಾಜರ ಪರವಾದ ಜಯಘೋಷ ಕೇಳಿ ನಾನು ಗಲಿಬಿಲಿಗೆ ಬಿದ್ದೆನು. ಅದಕ್ಕೇ ಹೀಗೆ ಓಡಿ ಬಂದೆನು! ಈಗ ಗೊತ್ತಾಯಿತು ಆ ದುಷ್ಟನ ದುಸ್ತಂತ್ರ!" ಎಂದನು ಧೀರಮಲ್ಲ. ಅಷ್ಟು ಹೊತ್ತಿಗೆ ಸುತ್ತಮುತ್ತಲೂ ಉರಿ ಬೆಂಕಿಯ ಪ್ರಕಾಶ ಕಾಣತೊಡಗಿತು. ಪಟ್ಟಣದೊಳಗೆ ಅನೇಕ ಮನೆಗಳಿಗೆ ಬೆಂಕಿ ಬಿದ್ದು ಉರಿಯತೊಡಗಿದುವು, ರಾಜಮಾರ್ಗದ ಕಡೆಯಿಂದ ಮಾತ್ರವಲ್ಲದೆ, ಎಲ್ಲಾ ದಿಕ್ಕುಗಳಿಂದಲೂ ಕೂಗಾಟಗಳೂ, ಆರ್ತನಾದಗಳೂ ಕೇಳತೊಡಗಿದುವು. ಚಂದ್ರವರ್ಮನ ಮಾಳಿಗೆಯ ಮೇಲಿನಿಂದ ಉರಿಯುತ್ತಿರುವ ನಗರವನ್ನು ನೋಡಿ, ದೊಡ್ಡದಾಗಿ ನಿಟ್ಟುಸಿರಬಿಡುತ್ತ, ಮೆಟ್ಟಲಿಳಿದು ಭವನದ ಮುಂದೆ ಬಂದನು. ಅಲ್ಲಿ ಆಯುಧಧಾರಿಗಳಾದ ಭಟರು, ನಾಲ್ಕೈದು ನೂರರಷ್ಟು, ಸಾಲು ಸಾಲಾಗಿ ನಿಲ್ಲಿಸಲ್ಪಟ್ಟಿದ್ದರು. ಅವರ ಪಕ್ಕದಲ್ಲೇ ಅಶ್ವಾರೂಢರಾದ ಕೆಲವರು ದೊಡ್ಡ ದೊಡ್ಡ ಈಟಿಗಳನ್ನು ಹಿಡಿದುಕೊಂಡು ಸರ್ವಸನ್ನದ್ಧರಾಗಿದ್ದರು. ಸ್ವಲ್ಪ ಸಮಾಧಾನವಾಯಿತು ಚಂದ್ರವರ್ಮನಿಗೆ.

ಚಂದ್ರವರ್ಮನು ಐವತ್ತು ಮಂದಿ ಭಟರನ್ನೂ, ಹತ್ತು ಮಂದಿ ಅಶ್ವಿಕರನ್ನೂ ರಾಜ ಪ್ರಾಸಾದದ



ರಕ್ಷಣೆಗೆ ನಿಯೋಗಿಸಿದನು. ಉಳಿದವರನ್ನು ಎರಡು ಸಮಭಾಗಗಳಾಗಿ ಬೇರ್ಪಡಿಸಿ, ಒಂದು ಭಾಗವನ್ನು ಸೇನಾಧಿಪತಿ ಧೀರಮಲ್ಲನಿಗೆ ಒಪ್ಪಿಸುತ್ತ, "ನಾನು ಕೋಟೆಯ ದ್ವಾರಗಳನ್ನು ದಾಟಿ ರಾಜಮಾರ್ಗಕ್ಕೆ ಹೋದಕೂಡಲೇ ಮೂಡು ದಿಕ್ಕಿಗೆ ತಿರುಗುತ್ತೇನೆ. ನೀನು ನಿನ್ನ ಸೈನ್ಯದೊಂದಿಗೆ ಪಶ್ಚಿಮ ದಿಕ್ಕಿಗೆ ಹೋಗುವುದು ಒಳ್ಳೆಯದು. ಆಗ ಶತ್ರುಗಳು ನಮ್ಮ ಪದರಿನೊಳಗೆ ಸಿಕ್ಕುತ್ತಾರೆ. ಈ ರೀತಿಯಾಗಿ ನಾವಿಬ್ಬರೂ ಶತ್ರು ಸೈನ್ಯವನ್ನು ಭೇದಿಸುತ್ತ, ಅರ್ಧ ಚಂದ್ರಾಕಾರವಾಗಿ ತಿರುಗಿ ಉತ್ತರ ದ್ವಾರದ ಹತ್ತಿರ ಸೇರಿಕೊಳ್ಳೋಣ. ಘಾತುಕ ಶತ್ರುಗಳಾದುದರಿಂದ ಒಂದು ವೇಳೆ ದೈವನಿರ್ಣಯ ಬೇರೆ ವಿಧವಾಗಿದ್ದರೆ, ಆಗಿನ ಪರಿಸ್ಥಿತಿಗೆ ತಕ್ಕ ಹಾಗೆ ಸಂಕೇತ ಧ್ವನಿಗಳ ಮೂಲಕ ನಮ್ಮ ನಮ್ಮ ನಿಶ್ಚಯಗಳನ್ನು ಪರಸ್ಪರ ತಿಳಿಸಿಕೊಳ್ಳಬೇಕು. ಪ್ರಸ್ತುತವಾಗಿ ಬೇರೆ ಮಾರ್ಗವೇನೂ ನನಗೆ ಕಾಣುವುದಿಲ್ಲ" ಎಂದನು.

"ಅದೇ ಸರಿ, ಯುವರಾಜಾ! ಹಾಗೆಯೇ ಮಾಡೋಣ. ಕುಲದೇವತೆಯ ಸಹಾಯ ನಮಗಿದೆಯೆಂದು ನಂಬೋಣ. ನೀವು ಮಾತ್ರ ಅವಸರಪಟ್ಟು ಅಪಾಯದ ಸಾಹಸಕ್ಕೆ ತಲೆಹಾಕಿ ಬಿಡಬೇಡಿ. ಏಕೆಂದರೆ ಕತ್ತಲೆಯ ಎಡೆಯಲ್ಲಿ ಶತ್ರುಗಳ ಬಲ ಎಷ್ಟೆಂದು ಹೇಳಲು ಸಾಧ್ಯವಿಲ್ಲವಷ್ಟೆ?" ಎಂದು ಹೇಳಿದನು ಧೀರಮಲ್ಲ.

ಮತ್ತೆ ತಡಮಾಡದೆ, ಎರಡು ಸೈನ್ಯ ವಿಭಾಗಗಳೂ, "ಸೂರ್ಯವರ್ಮ ಮಹಾರಾಜರಿಗೆ ಜೈ! ಎಂದು ಘೋಷವೆಬ್ಬಿಸುತ್ತ, ಅರಮನೆಯ ಪ್ರಾಂಗಣವನ್ನು ದಾಟಿ ಪಟ್ಟಣದೊಳಗೆ ಪ್ರವೇಶ ಮಾಡಿದುವು. ಅಷ್ಟು ಹೊತ್ತಿಗೆ ಪೂರ್ವ ದಿಕ್ಕಿನಲ್ಲಿ ಅರುಣೋದಯದ ಪ್ರಕಾಶವು ಕಾಣ ತೊಡಗಿತು. ಆಯುಧಗಳನ್ನು ಧರಿಸಿಕೊಂಡು, ಕುದುರೆಯ ಮೇಲಿದ್ದ ಸುಬಾಹು, ಅಕ್ಕಪಕ್ಕಗಳಲ್ಲಿ ಉರಿಯುತ್ತಿದ್ದ ಮನೆಗಳನ್ನು ಚಂದ್ರವರ್ಮನಿಗೆ ತೋರಿಸುತ್ತ, "ನೋಡಿದಿರಾ ಯುವರಾಜಾ, ಸರ್ಪಕೇತು ತನ್ನ ಕುಟಿಲ ಪ್ರಯತ್ನದಿಂದ ಸ್ವಲ್ಪ ಮಟ್ಟಿಗೆ ವಿಜಯವನ್ನೇ ಸಾಧಿಸಿಕೊಂಡನು. ಅವನ ಪಕ್ಷವೆಂದು ಪಟ್ಟಣದೊಳಗೆ ಪ್ರವೇಶಿಸಿದವರಲ್ಲಿ, ಸುಶಿಕ್ಷಿತರಾದ ಸೈನಿಕರು ಕೆಲವೇ ಮಂದಿ ಇದ್ದಾರೆ, ಅಷ್ಟೇ. ಹೆಚ್ಚಿನ ಭಾಗದವರೆಲ್ಲ ಕೊಳ್ಳೆ ಹೊಡೆಯಲಿಕ್ಕಾಗಿಯೇ ಬಂದ ಹಳ್ಳಿಗಳ ನಿವಾಸಿಗಳೇ. ನಾವು ದಯಾದಾಕ್ಷಿಣ್ಯ ತೋರಿಸದೆ ಅವರಲ್ಲಿ ಕೆಲವರನ್ನಾದರೂ ಹತಮಾಡದೆ ಉಪಾಯವಿಲ್ಲ. ಹಾಗೆ ಮಾಡಿದರೆ ಉಳಿದವರು ಹೆದರಿ ಪ್ರಾಣಗಳನ್ನು ಅಂಗೈಯಲ್ಲಿಟ್ಟುಕೊಂಡು ನಗರ ಬಿಟ್ಟು ಓಡಿ ಹೋಗುತ್ತಾರೆ. ಹಾಗೆ ಮಾಡೋಣವೇ ದೊರೆಗಳೇ?" ಎಂದನು.

ಈ ಆಲೋಚನೆ ಚೆನ್ನಾಗಿರುವಂತೆ ಚಂದ್ರವರ್ಮನಿಗೆ ತೋರಿತು. ಅವನು ತನ್ನೊಂದಿಗಿರುವ ಆಶ್ವಿಕರಿಗೆ ಎಚ್ಚರಿಕೆ ಕೊಟ್ಟು, ಬಹು ದೊಡ್ಡ ದನಿ

ಯಿಂದ ಜಯಜಯಾಕಾರ ಮಾಡಲು ಹೇಳಿದನು. ದೀವಟಿಗೆ ದೊಂದಿಗಳನ್ನು ಹಿಡಿದುಕೊಂಡು ಇತ್ತಲೂ ಅತ್ತಲೂ ಓಡಿಕೊಂಡಿದ್ದ ಕೊಳ್ಳೆಗಾರರ ಮೇಲೆ ತನ್ನ ಆಶ್ವಿಕರನ್ನು ಏರಿಸಿದನು.

ಮರುಕ್ಷಣದಲ್ಲಿ ಆಶ್ವಿಕರ ಕೈಯಲ್ಲಿದ್ದ ಈಟಿಗಳು ಕೊಳ್ಳೆಗಾರರ ಬೆನ್ನುಗಳಲ್ಲಿ, ಗುಂಡಿಗೆಗಳಲ್ಲಿ ಚುಚ್ಚಿಕೊಂಡವು. ಆಗ "ಅಯ್ಯಯ್ಯೋ ! ಸೂರ್ಯವರ್ಮನ ಸೈನಿಕರು ! ಸೂರ್ಯವರ್ಮನ ಸೈನಿಕರು!" ಎಂದು ಆ ಪ್ರಾಂತದಲ್ಲೆಲ್ಲಾ ಭಯಭೀತ, ಆರ್ತ ಕೋಲಾಹಲಗಳೆದ್ದುವು.



ಅದನ್ನನುಸರಿಸಿ ರಾಜಮಾರ್ಗದ ಆಚೆ ಈಚೆ ಸಂದುಗೊಂದುಗಳ ಕಡೆಯಿಂದ, "ಸೂರ್ಯವರ್ಮನ ಸೈನಿಕರೇ ? ಎಲ್ಲಿ ? ಎಲ್ಲಿ ? ಹೊಡೆಯಿರಿ ! ಕಡಿಯಿರಿ ! ಕೊಲ್ಲಿರಿ !" ಎಂಬ ವೀರಾವೇಶದ ಮಾತುಗಳನ್ನು ಕಿರುಚುತ್ತ ಓಡಿಬರುತ್ತಿರುವ ಕುದುರೆಗಳ ಖುರಪುಟ ಧ್ವನಿಗಳು ಕೇಳಿಸಿದುವು.

ಶತ್ರು ಸೈನ್ಯವನ್ನು ನುಚ್ಚುನೂರು ಮಾಡಲು ಚಂದ್ರವರ್ಮನಿಗೆ ಅದು ಒಳ್ಳೆಯ ಸಮಯವಾಗಿ ಕಂಡಿತು. ಅವನು ಬೇಗಬೇಗನೆ ತನ್ನ ಭಟರಲ್ಲಿ ಅರ್ಧ ಭಾಗವನ್ನು, ಶತ್ರು ಸೈನಿಕರು ಬರುವ ಸಂದು ಬೀದಿಗಳ ಆಚೆಯ ಬದಿಯಲ್ಲಿ ನಿಲ್ಲಿಸಿ, ಉಳಿದ ಅರ್ಧ ಮಂದಿಗಳನ್ನು ಎರಡನೇ ಬದಿಯಲ್ಲಿ ನಿಲ್ಲಿಸಿದನು. ಮುಂದೆ ಬಂದವರನ್ನೂ, ಹಿಂದೆ ಹೋದವರನ್ನೂ ಕಡಿದು ಕೊಲ್ಲುವುದು ಚಂದ್ರವರ್ಮನ ಉಪಾಯವಾಗಿತ್ತು.

ಅವನ ಉಪಾಯದಂತೆಯೇ ಕೆಲಸವಾಯಿತು. ಮಿತಿಮೀರಿದ ವಿಜಯೋತ್ಸಾಹದಿಂದ ಸಂದು ಬೀದಿಗಳಲ್ಲಿ ಕಾದಿದ್ದ ಸರ್ಪಕೇತುವಿನ ಸೈನಿಕರು, ರಾಜಮಾರ್ಗದಲ್ಲಿ ಏನಿರುವುದೆಂದು ಗಮನಿಸದೆಯೇ ವೇಗವಾಗಿ ಅಲ್ಲಿಗೆ ನುಗ್ಗಲು ಪ್ರಯತ್ನಿಸಿದರು. ಎರಡು ಕಡೆಗಳಲ್ಲಿಯೂ, ಸರ್ವ ಸನ್ನದ್ಧರಾಗಿದ್ದ ಚಂದ್ರವರ್ಮನ ಭಟರು, ಬಂದಬಂದವರನ್ನೆಲ್ಲಾ ಈಟಿಗಳಿಂದ ತಿವಿದು ತಿವಿದು ಹಾಕಿದರು. ಅಲ್ಲಿ ನಡೆಯುವ ಬೀಭತ್ಸವನ್ನು ತಿಳಿದು, ಹಿಂದಿರುಗಿ ಓಡುವುದರೊಳಗೇ, ಶತ್ರುಗಳಲ್ಲಿ ಹೆಚ್ಚಿನ ಭಾಗವು ಚಂದ್ರವರ್ಮನ ಭಟರಿಂದ ನಿರ್ದಯವಾಗಿ ಕೊಲ್ಲಲ್ಪಟ್ಟಿತು.

ಈ ವಿಜಯದಿಂದ ಚಂದ್ರವರ್ಮನ ಭಟರಲ್ಲಿ ಬಲವಾದ ಆತ್ಮವಿಶ್ವಾಸವು ನೆಲೆಯಾಯಿತು. ಅವರು ಶತ್ರುಗಳ ಗುಂಡಿಗೆ ಸೀಳಿಹೋಗುವಂತೆ, "ಸೂರ್ಯವರ್ಮ ಮಹಾರಾಜರಿಗೆ ಜೈ!" ಎಂದು ಕೂಗುತ್ತ ರಾಜಮಾರ್ಗದ ಮೇಲೆ, ಕಂಡ ಪ್ರತಿ ಸೈನಿಕನನ್ನೂ, ಕೊಳ್ಳೆ ಹೊಡೆಯುವವರನ್ನೂ ಬೆಂಬತ್ತಿ ತಮ್ಮ ಈಟಿಗಳಿಂದ, ಕತ್ತಿಗಳಿಂದ ತಿವಿದೂ ಕಡಿದೂ ನೆಲಕ್ಕೊರಗಿಸುತ್ತಿದ್ದರು. ಪಟ್ಟಣದ ಪ್ರಜೆಗಳು ಕೂಡಾ, ತಮ್ಮ ಯುವರಾಜನು ಭಟರೊಂದಿಗೆ ಬರುವುದನ್ನು ಗುರುತಿಸಿ, ನಡೆದ ಮೋಸವನ್ನು

ತಿಳಿದು ಸಿಕ್ಕಿದ ಆಯುಧಗಳನ್ನು ಎತ್ತಿಕೊಂಡು ಶತ್ರುಗಳ ಮೇಲೆ ಮುಗಿಬಿದ್ದರು.

ಸ್ವಲ್ಪ ಹೊತ್ತಿಗೆ ಚಂದ್ರವರ್ಮನು ಇದಿರುಬಿದ್ದ ಶತ್ರುಗಳನ್ನೆಲ್ಲ ಹತಮಾಡುತ್ತ, ಉತ್ತರ ದ್ವಾರವನ್ನು ಸಮೀಪಿಸಿದನು. ಶತ್ರು ಸಂಹಾರಕ್ಕಾಗಿ ಪಶ್ಚಿಮದ ಕಡೆಗೆ ಹೋಗುತ್ತಿದ್ದ ಧೀರಮಲ್ಲನು ಕೂಡಾ ತುಸು ದೂರದಲ್ಲೇ ಕಾಣಿಸಿದನು. ಆದರೆ ಆದೇ ಸಮಯದಲ್ಲಿ ಅವನ ಹಿಂದಿನ ಭಾಗದಲ್ಲಿ ದೊಡ್ಡದೊಂದು ಅಶ್ವಿಕ ದಳವು ಕದಲಿಕೊಂಡಿರುವುದನ್ನು ಚಂದ್ರವರ್ಮನು ನೋಡಿದನು.

ಅಷ್ಟರಲ್ಲೇ ಧೀರಮಲ್ಲನು ತನ್ನ ಅಶ್ವಿಕರೊಂದಿಗೆ ಚಂದ್ರವರ್ಮನ ಸಮೀಪ ಬಂದು, "ಯುವರಾಜಾ! ನಾವೀಗ ತಡಮಾಡದೆ ರಾಜ ಪ್ರಾಸಾದದ ಕೋಟೆ ಸೇರಿಬಿಡುವುದು ಒಳ್ಳೆಯದು. ಸರ್ಪಕೇತು ಸ್ವತಃ ಇನ್ನಷ್ಟು ಸೈನ್ಯದೊಂದಿಗೆ ಪಟ್ಟಣದೊಳಗೆ ಪ್ರವೇಶಿಸಿದ್ದಾನೆ. ಈಗ ಅಸಂಖ್ಯಾಕರಾಗಿ ಕಾಣುವ ಆ ಶತ್ರು ಸೈನಿಕರೊಂದಿಗೆ, ಕಡಿಮೆ ಸಂಖ್ಯೆಯಲ್ಲಿರುವ ನಾವು ಮುಖಾಮುಖೀ ತಾಗಿಕೊಂಡರೆ ಆತ್ಮಹತ್ಯಕ್ಕೆ ಸಮಾನವಾಗಬಹುದು. ಕೋಟೆಯ ರಕ್ಷಣೆಯ ಆಶ್ರಯದಲ್ಲಿ ಹೋರಾಡೋಣ. ಅಷ್ಟರಲ್ಲಿ ಸರಿಹದ್ದುಗಳಲ್ಲಿರುವ ನಮ್ಮ ಸೈನ್ಯವೂ ಸಹಾಯಕ್ಕೆ ಬರಬಹುದು" ಎಂದನು.

ಸರ್ಪಕೇತು ಮತ್ತಷ್ಟು ಸೈನ್ಯದೊಂದಿಗೆ ಬಂದಿರುವನೆಂಬುದನ್ನು ತಿಳಿದು ಚಂದ್ರವರ್ಮನಿಗೆ ಸಿಡಿಲು ಬಡೆದ ಹಾಗಾಯಿತು. ಅಂದರೆ ಅವನು ಈಗ ಮಾಯೋಪಾಯದಿಂದ ಮುಕ್ತನಾಗಿ, ಪ್ರತ್ಯಕ್ಷ ದಂಡೋಪಾಯಕ್ಕೆ ಸಿದ್ಧನಾಗಿ ಬಂದಿರುವನೆಂದಾಯಿತು!

ಚಂದ್ರವರ್ಮನು ತನ್ನ ಕುದುರೆಯನ್ನು ತಟಕ್ಕನೆ ಹಿಂದಿರುಗಿಸಿದನು. ಸುಬಾಹು, ಧೀರಮಲ್ಲರು ತಮ್ಮ ತಮ್ಮ ಕುದುರೆಗಳನ್ನು ಕೂಡಾ ತಿರುಗಿಸಿ ಚಂದ್ರವರ್ಮನ ಎರಡು ಬದಿಗಳಲ್ಲಿಯೂ ಸಾಗಿಸಿದರು. ಅವರ ಹಿಂದೆಯೇ ವೀರ ಭಟರೂ ಹೊರಟರು. ದಾರಿಯಲ್ಲೆಲ್ಲಿಯೂ ಅವರ ಇದಿರಿಗೆ ಶತ್ರು ಸೈನಿಕರು ಕಾಣಲಿಲ್ಲ. ಅವರೆಲ್ಲರೂ ಪ್ರಾಸಾದದ ಹತ್ತಿರ ಬರುವಷ್ಟರಲ್ಲಿ, ಮುಖ ದ್ವಾರದ ಮುಂದೆ, ಶತ್ರು ಪದಾತಿ ಸೈನಿಕರೂ, ಅಶ್ವಿಕರೂ ಗುಂಪಾಗಿರುವುದು ಕಂಡಿತು. ಅವರೆಲ್ಲಾ ಬಾಗಿಲನ್ನು ಒಡೆಯಲು ನಾನಾ ಪ್ರಯತ್ನಮಾಡಿಕೊಂಡಿದ್ದರು. ಅದನ್ನು ನೋಡಿ ಚಂದ್ರವರ್ಮನು ರಣ ಭಯಂಕರನಾಗಿ ಗರ್ಜಿಸುತ್ತ, ತನ್ನವರೊಂದಿಗೆ ಆತ್ಮಾವೇಶದಿಂದ ಅವರ ಮೇಲೆ ಧುಮುಕಿದನು. ಇದ್ದಕ್ಕಿದ್ದ ಹಾಗೆ ದೊಡ್ಡದೊಂದು ಸಿಡಿಲು ಅಲ್ಲಿಗೇ ಬಂದು ಬಿದ್ದ ಹಾಗಾಯಿತು. —(ಇನ್ನೂ ಇದೆ)





# ಪರಿವರ್ತನೆ

ತನ್ನ ಕೈಯಿಂದ ತಪ್ಪಿಸಿಕೊಂಡು ಓಡುವ ಬೇತಾಳಕ್ಕೆ ಅದೊಂದು ಮರವನ್ನು ಬಿಟ್ಟರೆ ಬೇರೆ ದಿಕ್ಕಿಲ್ಲದಂತಾದುದು ತನ್ನ ಪುಣ್ಯವೆಂದುಕೊಂಡು ರಾಜಾ ತ್ರಿವಿಕ್ರಮನು, ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡಿಕೊಂಡಿದ್ದ ಮಾನವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯುತೊಡಗಿದನು.

ಆ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ! ಈ ಸಮಯದಲ್ಲಿ ಬೆಚ್ಚಗೆ ಸುಪ್ಪತ್ತಿಗೆಯಲ್ಲಿ ಸುಖನಿದ್ರೆ ಮಾಡಿಕೊಂಡಿರಬೇಕಾದ ನೀನು, ಈ ಭಯಂಕರ ಸ್ಮಶಾನ ಭೂಮಿಯಲ್ಲಿ ಎಡತಾಕಬೇಕಾಗಿ ಬಂದುದನ್ನು ನೋಡುವಾಗ ನನಗೆ ಅಯ್ಯೋ ಅನಿಸುತ್ತದೆ. ರಾಜನಾದವನು ತಾನು ಸಾಧಿಸಬೇಕಾದ ಕಾರ್ಯಗಳನ್ನು ಸೇವಕಾಳಿಗಳ ಮೂಲಕ ಸಾಧಿಸಬಹುದಾದರೂ, ನೀನೇ ಸ್ವತಃ ಇಷ್ಟೊಂದು ಕಠೋರ ದೀಕ್ಷೆಯಿಂದ ಏನನ್ನು ಸಾಧಿಸಲೆಳಸುವಿಯೋ? ತೀರಾ ಕಾರ್ಯವು ಸಾನುಕೂಲವಾದ ಮೇಲೆ

ಬೇತಾಳ ಕಥೆಗಳು



ಸೌಗಂಧ ದೇಶದ ಯುವರಾಜನ ಹಾಗೆ, ಚಿತ್ತಭ್ರಮೆ ಹಿಡಿದವನ ರೀತಿಯಲ್ಲಿ ಪ್ರವರ್ತಿಸಬೇಡಯ್ಯಾ ! ಆ ಯುವರಾಜನ ವಿಚಿತ್ರ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ನಡೆಯುವಿಯಂತೆ" ಎಂದು ಹೀಗೆ ಕಥೆಯನ್ನು ಪ್ರಾರಂಭಮಾಡಿತು :

ಸೌಗಂಧ ದೇಶದ ಯುವರಾಜನ ಹೆಸರು ರೂಪಸೇನ. ಅವನು ಗುರುಕುಲದಲ್ಲಿ ಶ್ರದ್ಧೆಯಿಂದ ವಿದ್ಯಾಭ್ಯಾಸ ಮಾಡಿ, ರಾಜರಿಗೆ ಉಚಿತವಾದ ಎಲ್ಲಾ ವಿದ್ಯೆಗಳನ್ನೂ ಕಲಿತು ಗಟ್ಟಿಗನಾಗಿದ್ದನು. ಮುಖ್ಯವಾಗಿ ಲಲಿತಕಲೆಗಳ ಮೇಲೆ ಅವನಿಗೆ ವಿಶೇಷ ಪ್ರೀತಿಯಿದ್ದಿತು. ಅಂತಹ ಯುವರಾಜನಲ್ಲಿದ್ದ ಒಂದೇ ಒಂದು ಲೋಪವೇನೆಂದರೆ, ಅವನಿಗೆ ಕೋಪ ಜಾಸ್ತಿಯಾಗಿತ್ತು. ಹಾಳಾದ ಕೋಪ ಬಂದಾಗ ಅವನು ಏನೇನೋ ದುಡುಕುತನವಾಗಿ ಪ್ರವರ್ತಿಸಿಬಿಡುವನು. ಆಗಿನ ಅವನ ಪ್ರವರ್ತನೆಯನ್ನು ನೋಡಿ ವೃದ್ಧ ರಾಜ ಗುಣಸೇನನು ಎಷ್ಟೋಸಾರಿ ಬುದ್ಧಿ ಹೇಳಿದ್ದೂ ಆಯಿತು. ಈಗ ಮಗನ ಭವಿಷ್ಯತ್ತು ಏನಾಗುವುದೋ ಎಂದು ಚಿಂತೆಗೆ ಬೀಳುವನು.

ಒಂದು ದಿನ ರೂಪಸೇನನು ಉದ್ಯಾನದಲ್ಲಿ ಪ್ರಕೃತಿ ಸೌಂದರ್ಯವನ್ನು ಸವಿಯುತ್ತ ವಿಹರಿಸಿಕೊಂಡಿರುವಾಗ ಸ್ವಲ್ಪ ದೂರದಲ್ಲಿ ಮಧುರವಾದೊಂದು ಗೀತವು ಕೇಳಬಂದಿತು. ಅವನು ಬಹಳ ಆಸಕ್ತಿಯಿಂದ ಆ ಹಾಡನ್ನು ಕೇಳುತ್ತ ಹಾಗೆಯೇ ನಿಂತನು. ಹಾಡು ನಿಂತ ಕೂಡಲೇ ಹಾಡಿದ ವ್ಯಕ್ತಿಯನ್ನು ತನ್ನ ಹತ್ತಿರ ಕರೆದುಕೊಂಡು ಬರುವಂತೆ ಭಟರನ್ನು ಕಳುಹಿಸಿದನು. ಹಾಗೆ ಬರಲ್ಪಟ್ಟವಳು ಮಹಾರಾಣಿಯ ಇಷ್ಟ ಸಖಿಯಾದ ಚಂದ್ರಾವತಿ.

ರೂಪಸೇನನು ಅವಳನ್ನು ನೋಡಿ, "ಚಂದ್ರಾವತೀ ! ನೀನು ಇಷ್ಟು ಚೆನ್ನಾಗಿ ಹಾಡುವವವಳೆಂದು ನನಗೆ ಗೊತ್ತಿರಲಿಲ್ಲ. ಈಗ ಹಾಡಿದ ಹಾಡನ್ನು ಬೇರೆಯವರು ರಚಿಸಿದ್ದೋ, ಅಲ್ಲಾ ನೀನೇ ಸ್ವತಃ ರಚಿಸಿದೆಯಾ ?" ಎಂದು ಕೇಳಿದನು.

ಚಂದ್ರಾವತಿ ವಿನಯದಿಂದ, "ಇಲ್ಲ, ಒಬ್ಬರು ಸಂಗೀತ ವಿದ್ವಾಂಸರು ಹಾಡುತ್ತಿದ್ದಾಗ ಕೇಳಿ ಕಲಿತುಕೊಂಡೆನು, ಅಷ್ಟೇ" ಎಂದಳು.

"ಹಾಗೇನು ! ಇಷ್ಟೊಂದು ಸೊಗಸಾಗುವಂತೆ ಲಯಬದ್ಧ ಮಾಡಿ ಸ್ವರಹಾಕಿದ ಆ ವಿದ್ವಾಂಸನನ್ನು ನೋಡಿಯೇ ತೀರಬೇಕು" ಎಂದು ರೂಪಸೇನನು ಚಂದ್ರಾವತಿಯ ಮೂಲಕ ಮರುದಿನ ಆ ವಿದ್ವಾಂಸನನ್ನು ಕರೆಯಿಸಿಕೊಂಡನು.

ರೂಪಸೇನನು ವಿದ್ವಾಂಸನಿಗೆ, ಗೌರವ ಸತ್ಕಾರಗಳನ್ನು ಮಾಡಿ, ಆಮೇಲೆ ಅವನನ್ನು ನೋಡಿ, "ಅಯ್ಯಾ, ನೀವು ಇಷ್ಟು ಮಧುರವಾಗಿ ಸ್ವರಹಾಕಿ ಸಂಗೀತಗೊಳಿಸಿದ ಆ ಹಾಡಿನ ರಾಗ ಅಮೋಘವಾಗಿದೆ. ಅದರ ಸಾಹಿತ್ಯ ಕೂಡಾ ಅಸಾಮಾನ್ಯವಾದ ಭಾವಾರ್ಥಗಳಿಂದ ಕೂಡಿದೆ. ಅದನ್ನು ತಾವೇ ರಚಿಸಿದಿರಾ ?" ಎಂದು ಕೇಳಿದನು.

ಅದಕ್ಕೆ ವಿದ್ವಾಂಸನು "ಅಲ್ಲ ಪ್ರಭೂ, ನನ್ನ ಮಿತ್ರನೊಬ್ಬನು ಕವಿ. ಅವನು ಬರೆದ ಗೀತೆಗೆ ನಾನು ರಾಗಸ್ವರ ಹಾಕಿಕೊಟ್ಟೆ" ಎಂದನು.

ಅವನನ್ನು ಕಳುಹಿಸಿಕೊಟ್ಟು, ರೂಪಸೇನನು ಆ ಕವಿಯನ್ನು ತನ್ನ ಬಳಿಗೆ ಕರೆಯಿಸಿ ದೊಡ್ಡ ರೀತಿಯಲ್ಲಿ ಸತ್ಕಾರ ಮಾಡಿದನು. ಅನಂತರ ಗೀತೆಯನ್ನು ಕುರಿತು ಕೇಳಿದನು.

"ಹೌದು ಪ್ರಭೂ, ನಾನು ಆ ಗೀತೆಯನ್ನು ಅಷ್ಟೊಂದು ಮಧುರಭಾವಯುತವಾಗಿ ಬರೆದೆನೆಂದರೆ, ಆ ಘನತೆ ನನ್ನದಲ್ಲ. ವಸಂತ ಮಿತ್ರನೆಂಬ ಚಿತ್ರಕಾರನದು. ಅವನು ಚಿತ್ರಿಸಿದ ಒಂದು ಚಿತ್ರದೊಳಗಿನ ಯುವತಿಯ ಸೌಂದರ್ಯಕ್ಕೂ, ಸೌಕುಮಾರ್ಯಕ್ಕೂ, ಮುಖದಲ್ಲಿ ಬಿಂಬಿಸುವ ಸಂಸ್ಕಾರದ ಕಳೆಗೂ ಮುಗ್ಧನಾಗಿ ಉಕ್ಕಿದ ಭಾವನೆಯಿಂದ ಆ ಗೀತೆಯನ್ನು ಬರೆದೆನು" ಎಂದನು.

ಒಬ್ಬ ಕವಿಯನ್ನು ಅಷ್ಟೊಂದು ಆಕರ್ಷಣೆ ಮಾಡಿದ ಚಿತ್ರದೊಂದಿಗೆ ಆ ಚಿತ್ರಕಾರನನ್ನು ತನ್ನ ಬಳಿಗೆ ಕರೆದುಕೊಂಡು ಬರಲು ರೂಪಸೇನನು ಭಟರನ್ನು ಕಳುಹಿಸಿದನು. ಆ ಚಿತ್ರಕಾರನು ತೋರಿಸಿದ ಚಿತ್ರವನ್ನು ನೋಡಿ ರೂಪಸೇನನು ಕೆಲವು ಕ್ಷಣ ನಿಶ್ಚೇಷ್ಟಿತನಾಗಿ, ಆಮೇಲೆ "ವಸಂತ ಮಿತ್ರಾ! ಈ ಚಿತ್ರದೊಳಗಿನ ಸುಂದರಿ ಸಜೀವಳಾಗಿರುವಳೇ, ಅಥವಾ ನಿನ್ನ ಮನೋಭಾವನೆಯಿಂದಲೇ ರೂಪಿಸಿದಿಯಾ?" ಎಂದು ಕೇಳಿದನು.

"ಸಜೀವ ಸುಂದರಿಯೇ ಪ್ರಭುಗಳೇ! ಇವಳು ಸುವರ್ಣಪುರಿಯ ಜಮೀನುದಾರರ ಏಕೈಕ ಪುತ್ರಿ ಸ್ವರ್ಣಮಂಜರಿ. ನಾನು ಅವಳನ್ನು ಒಂದು ದೇವಾಲಯದಲ್ಲಿ ನೋಡಿ, ಆ ಸೌಂದರ್ಯವನ್ನು ಮರೆಯಲಾಗದೆ, ಹೀಗೆ ಚಿತ್ರವಾಗಿ ಬರೆದುಕೊಂಡೆನು" ಎಂದನು.

ಅವನು ಹೇಳಿದುದನ್ನು ಕೇಳಿ ರೂಪಸೇನನು ಪರಮಾನಂದವನ್ನು ತಾಳಿ, ಸ್ವರ್ಣಮಂಜರಿಯನ್ನು ಕರೆದುಕೊಂಡು ಬರಲು ಭಟರನ್ನು ಕಳುಹಿಸಿದನು. ಭಟರು ಹಿಂದಿರುಗಿ ಬಂದು, ಅವನು ಊಹಿಸಿರ





ದಂತಹ ಉತ್ತರ ಹೇಳಿದರು. ಅದೇನೆಂದರೆ, ಸ್ವರ್ಣಮಂಜರಿಗೆ ಒಂದು ವಾರದ ಕೆಳಗೆ ವಿವಾಹ ವಾಗಿ, ಅವಳು ಈಗ ಗಂಡನ ಮನೆಗೆ ಹೊರಟು ಹೋಗಿದ್ದಾಳಂತೆ.

ಅದನ್ನು ಕೇಳಿ ವಿಪರೀತವಾದ ಆಶಾಭಂಗಕ್ಕೆ ಗುರಿಯಾದ ರೂಪಸೇನನು ಎಲ್ಲೆಯಿಲ್ಲದಷ್ಟು ಕೋಪ ದಿಂದ ಚಂದ್ರಾವತಿಯನ್ನೂ, ಸಂಗೀತ ವಿದ್ವಾಂಸ ನನ್ನೂ, ಕವಿಯನ್ನೂ, ವಸಂತಮಿತ್ರನನ್ನೂ ಹಿಡಿಸಿ ಸೆರೆಮನೆಗೆ ಹಾಕಿಸಿದನು. ಅವರು ಹೊಂದಿದ ಭಾವಾವೇಗಗಳೇ ತನಗೆ ಇಂತಹ ನಿರಾಶೆಯುಂಟಾ ಗಲು ಕಾರಣವಾದುವೆಂಬ ಅವನ ಮೂರ್ಖವಾದ ಗಳಿಗೆ, ಯಾರಿಂದಲೂ ಸಮಾಧಾನ ಹೇಳಲು ಸಾಧ್ಯವಾಗಲಿಲ್ಲ.

ಮುಂದೆ ಒಂದು ವರ್ಷ ಕಳೆಯಿತು. ರೂಪ ಸೇನನು ನಡೆದುದನ್ನೆಲ್ಲಾ ಪೂರ್ತಿ ಮರೆತುಹೋದನು. ಆದರೆ ಅವನ ಕೋಪಾವೇಶಗಳಿಗೆ ಗುರಿಯಾದ ನಿರ್ದೋಷಿಗಳು ಮಾತ್ರ ಸೆರೆಮನೆಯೊಳಗೆ ತಮ್ಮ ಹಣೆಬರಹಕ್ಕೆ ನೊಂದು ಕಂದಿಹೋಗುತ್ತಿದ್ದರು.

ಸೌಗಂಧ ದೇಶದ ಪಕ್ಕದಲ್ಲೇ ಜಯಂತ ದೇಶ ವಿದ್ದಿತು. ಆ ದೇಶದ ರಾಜನು ಪ್ರತಿ ವರ್ಷವೂ ದೊಡ್ಡ ರೀತಿಯಲ್ಲಿ ವಸಂತೋತ್ಸವ ಮಾಡುತ್ತಾನೆ. ಅವನು ಕಳುಹಿಸಿದ ಆಹ್ವಾನವನ್ನು ಸ್ವೀಕರಿಸಿ ರೂಪ ಸೇನನು ಅಲ್ಲಿಗೆ ಹೋದನು. ಆ ಉತ್ಸವದಲ್ಲಿ ಒಂದು ದಿನ ಒಬ್ಬಳು ಯುವತಿಯ ಸಂಗೀತ ಕಚೇರಿ ಅದ್ಭುತವಾಗಿದ್ದಿತು. ಅವಳ ಗಾತ್ರ ಸ್ವರವೂ ಮುಖ ಭಂಗಿಯೂ ಅವನನ್ನು ಅತ್ಯಂತವಾಗಿ ಆಕರ್ಷಣೆ ಮಾಡಿದುವು.

ಅವಳು ಯಾರೆಂದು ರೂಪಸೇನನು ಪ್ರಶ್ನೆ ಮಾಡಲು, ಜಯಂತ ದೇಶದ ಯುವರಾಜನು ಸಮಾಧಾನ ಹೇಳುತ್ತ, " ಅವಳು ನಿಮ್ಮ ದೇಶದ ಯುವತಿಯೇ. ಹೆಸರು ಸ್ವರ್ಣಮಂಜರಿ. ಸುವರ್ಣ ಪುರದ ಜಮೀನುದಾರರ ಕುಮಾರಿ. ಅವಳು ನಮ್ಮ ದೇಶದ ನವೀನನೆಂಬ ಗಾಯಕನನ್ನು ಮದುವೆಯಾಗಿ ಇಲ್ಲಿಗೆ ಬಂದಿದ್ದಾಳೆ. ಅವಳು ದೊಡ್ಡ ಸುಗುಣಗಳ ರಾಶಿ. ಮಧುರವಾದ ಕಂಠಸ್ವರವುಳ್ಳ ಗಾಯಕಿ ಕೂಡಾ " ಎಂದನು.

ಅದನ್ನು ಕೇಳಿ ರೂಪಸೇನನಿಗೆ ಹಿಂದೆ ನಡೆದು ದೆಲ್ಲಾ ಒಮ್ಮೆಗೇ ನೆನಪಿಗೆ ಬಂದಿತು. ಕ್ಷಣಕಾಲ ಅವನು ತೀವ್ರ ಕೋಪೋದ್ವೇಗಕ್ಕೆ ಗುರಿಯಾದನು. ಆದರೆ ಇದಕ್ಕೆ ಕಾರಣಳಾದವಳು ಸ್ತ್ರೀಯಾದುದ ರಿಂದ, ಅದರ ಮೇಲೆ ಮದುವೆಯಾದವಳಾದುದ ರಿಂದ, ಎಲ್ಲಕ್ಕೂ ಮೇಲೆ ಬೇರೆ ದೇಶದವಳಾಗಿ ಹೋದುದರಿಂದ ಅವನ ಕೋಪಕ್ಕೆ ಅಣೆಕಟ್ಟು ಬಿದ್ದಂತಾಗಿತ್ತು.

ಸಂಗೀತ ಕಚೇರಿ ಮುಗಿದ ಮೇಲೆ ಅವನು ಸ್ವರ್ಣ ಮಂಜರಿಯೊಂದಿಗೆ ಮಾತಾಡಬೇಕೆಂಬ ತನ್ನ ಕುತೂಹಲವನ್ನು ವ್ಯಕ್ತಪಡಿಸಿದನು. ಗಂಡನೊಂದಿಗೆ

ಅವಳು ಬಂದು ರೂಪಸೇನನೊಂದಿಗೆ ಸ್ವಲ್ಪಹೊತ್ತು ಮಾತಾಡಿದಳು. ಆ ಸ್ವಲ್ಪಹೊತ್ತಿನಲ್ಲಿಯೇ ಅವನ ಮನಸ್ಸು ಅವನಿಗೇ ಆಶ್ಚರ್ಯವಾಗುವಂತೆ ಬದಲಾವಣೆ ಹೊಂದಿತು. ಸ್ವರ್ಣಮಂಜರಿಯ ಮೃದು ಮಾತುಗಳು, ಮುಖದಲ್ಲಿ, ಹಾವಭಾವಗಳಲ್ಲಿ ಕಾಣುವ ಸಂಸ್ಕಾರತೆ, ಸ್ವಚ್ಛತೆಗಳು ಅವಳ ರೂಪ ಲಾವಣ್ಯಗಳಿಗೆ ಇನ್ನಷ್ಟು ಮೆರುಗನ್ನಿತ್ತವು.

ಆ ದಿನವೇ ರೂಪಸೇನನು ತನ್ನ ರಾಜ್ಯಕ್ಕೆ ಹಿಂದಿರುಗಿ ಪ್ರಯಾಣ ಮಾಡಿದನು. ಅವನು ರಾಜಧಾನಿಯನ್ನು ಸೇರಿದ ಕೂಡಲೇ ಮೊದಲು ಮಾಡಿದ ಕೆಲಸವೆಂದರೆ, ತಾನು ಸೆರೆಯಲ್ಲಿಡಿಸಿದ ವಸಂತಮಿತ್ರ ಮೊದಲಾದವರನ್ನೆಲ್ಲಾ ಬಿಡುಗಡೆ ಮಾಡಿಸಿಬಿಟ್ಟನು. ಅಲ್ಲದೆ ಅವರನ್ನೆಲ್ಲ ಬಹಳ ಗೌರವದಿಂದ ತನ್ನ ಬಳಿಗೆ ಬರಮಾಡಿಸಿ, ತನಕೆ ವಸ್ತ್ರಾದಿ ಕಾಣಿಕೆಗಳನ್ನು ಕೊಟ್ಟು ಘನವಾಗಿ ಸತ್ಕಾರ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ಎಲೈ ಮಹಾರಾಜನೇ, ರೂಪಸೇನನ ವಿಚಿತ್ರ ಪ್ರವರ್ತನೆಯನ್ನು ಕುರಿತು ನಿನ್ನ ಅಭಿಪ್ರಾಯವೇನು? ಆಶೆಪಟ್ಟವಳು ತನಗೆ ದಕ್ಕದೆ ಹೋದುದಕ್ಕೆ ಅನ್ಯಾಯವಾಗಿ ವಸಂತಮಿತ್ರ ಮೊದಲಾದವರನ್ನು ಸೆರೆಮನೆಯಲ್ಲಿಡಿಸಿದ ಅವನು, ಅವಳು ಕಣ್ಣಿಗೆ ಬೀಳುತ್ತಲೇ ಅವರೆಲ್ಲರನ್ನೂ ಬಿಡುಗಡೆ ಮಾಡಿಸಿ ಸತ್ಕರಿಸಿದ್ದಾನೆ. ಅವನಲ್ಲಿ ಬಂದ ಇಷ್ಟೊಂದು ಮಾರ್ಪಾಟಿಗೆ ಅವನ ಚಿತ್ತಭ್ರಮೆಯೇ ಕಾರಣವೇನು? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಹೋಗುತ್ತದೆ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರೂಪಸೇನನಲ್ಲಿ ಪೂರ್ವಜನ್ಮ ಸಂಸ್ಕಾರವು ಅಡಗಿಕೊಂಡಿದ್ದಿತು. ಅದು ಮೋಡದ ಮರೆಯ ಚಂದ್ರನ ಹಾಗೆ, ಅವನ ಕೋಪದ ನೆರಳಿನಲ್ಲಿ ಕಾಣದೇ ಹೋಗಿತ್ತು. ಮೋಡವು ದಟ್ಟವಾಗಿ ಕವಿದಾಗ, ಒಮ್ಮೊಮ್ಮೆ ಸಿಡಿಲುಗಳೊಂದಿಗೆ ಮಳೆ ಸುರಿಯುವ ಹಾಗೆಯೇ ಅವನ ಕೋಪದ ತೀವ್ರತೆ ಯಾರೋ ಒಬ್ಬರನ್ನು ಬಾಧಿಸಿತು. ತೀವ್ರವಾದ ಸೂರ್ಯ ಕಿರಣಗಳು ಮೋಡಗಳನ್ನು ದೂರಪಡಿಸಿ ಪ್ರಕಾಶ ಬೀರುವಂತೆ ಸ್ವರ್ಣಮಂಜರಿಯೊಳಗಿನ ಪಾವಿತ್ರ್ಯವು ಅವನನ್ನು ಮಾಯಿಸಿ ಪುನೀತಗೊಳಿಸಿತು. ಅವನಲ್ಲಿ ಉಂಟಾದ ಈ ಪವಿತ್ರತೆ ಚಿತ್ತಸಂಸ್ಕಾರವೆನಿಸುತ್ತದೆಯೇ ಹೊರತು ಚಿತ್ತಭ್ರಮೆ ಅನಿಸಿಕೊಳ್ಳುವಂತಹುದಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡಿಕೊಂಡಿತು.



ಗಳನ್ನು ವಿಚಾರಿಸಿ, ತನ್ನ ಗುರುಕುಲಕ್ಕೆ ಹಿಂದಿರುಗಿ ಬಂದ ಮೇಲೆ, ತನ್ನೊಂದಿಗಿದ್ದ ಪ್ರಧಾನ ಶಿಷ್ಯ ರಾಮದಾಸನನ್ನು ನೋಡಿ, "ಚಂದ್ರಸೇನ, ಸೂರ್ಯ ಸೇನರಲ್ಲಿ ಯಾರು ನಮ್ಮ ಉತ್ತಮ ಶಿಷ್ಯನೆಂದು ನಿನ್ನ ಅಭಿಪ್ರಾಯ ?" ಎಂದು ಕೇಳಿದನು.

"ನಿಸ್ಸಂದೇಹವಾಗಿ ಸೂರ್ಯಸೇನನೇ ನಿಮ್ಮ ಉತ್ತಮ ಶಿಷ್ಯ" ಎಂದನು ರಾಮದಾಸ.

"ಯಾವುದರಿಂದ ?" ಎಂದು ಕಮಲಾನಂದನು ಪ್ರಶ್ನಿಸಿದನು.

"ಚಂದ್ರಸೇನನು ತನಗೆ ದೇವರಲ್ಲಿ ನಂಬುಗೆ ಇಲ್ಲ ವೆಂದನು. ಆದರೆ ಅದಕ್ಕೆ ವಿರುದ್ಧವಾಗಿ ಅವನ ನಗರದಲ್ಲೆಲ್ಲಾ ಅಸಂಖ್ಯ ದೇವಾಲಯಗಳು ಕಾಣು ತ್ತವೆ. ಸೂರ್ಯಸೇನನ ರಾಜ್ಯದಲ್ಲಿ ನಮಗೆ ಒಂದೇ ಒಂದು ದೇವಾಲಯವೂ ಕಾಣಲಿಲ್ಲ. ಆದುದರಿಂದ ಸೂರ್ಯಸೇನನೇ ನಿಮ್ಮ ಉತ್ತಮ ಶಿಷ್ಯ" ಎಂದನು ರಾಮದಾಸ.

ಕಮಲಾನಂದನು ಒಂದೆರಡು ಕ್ಷಣ ಮೌನವಾಗಿದ್ದು, "ನಾನು ಶಿಷ್ಯರಿಗೆ ವಿದ್ಯೆಗಳನ್ನು ಬೋಧಿಸುವಾಗ ಎಂದಿಗೂ ಎಲ್ಲಿಯೂ ದೇವರ ಪ್ರಸಕ್ತಿ ತಂದವನಲ್ಲ. ಯಾರಾದರೂ ಪ್ರಶ್ನಿಸಿದಾಗ ಮಾತ್ರ ತಕ್ಕ ಉತ್ತರ ಕೊಟ್ಟಿದ್ದೇನೆ, ಅಷ್ಟೇ. ಚಂದ್ರಸೇನ, ಸೂರ್ಯಸೇನ ರಲ್ಲಿ ಚಂದ್ರಸೇನನೇ ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದಾನೆ. ಅಂತಲೇ ಅವರಿಬ್ಬರೂ ಭಿನ್ನ ಮಾರ್ಗ ಹಿಡಿದರು. ಸೂರ್ಯಸೇನನಿಗೆ ದೇವರಲ್ಲಿ ನಂಬುಗೆ ಇಲ್ಲ. ಆದರೆ ಅವನ ಪಾಲನೆಯಲ್ಲಿರುವ ಪ್ರಜೆಗಳಿಗೆ ಆ ನಂಬುಗೆ ಇದೆ. ಒಂದು ದೇಶದ ರಾಜನಾದವನು ಆ ದೇಶದ ಪ್ರಜೆಗಳಿಗೆ ಇಷ್ಟವಾಗು ವಂತೆ ಪರಿಪಾಲಿಸುವುದೇ ಧರ್ಮ. ಅವನು ಹಾಗೆ ಮಾಡದೆ ಅಧಿಕಾರ ಬಲದಿಂದ ತನ್ನ ಅಭಿಪ್ರಾಯ ವನ್ನು ಪ್ರಜೆಗಳ ಮೇಲೆ ಅಮಲು ಪಡಿಸಿದನಾದರೆ ಅದು ಸರಿಯಲ್ಲ. ಅಂತಹ ರಾಜನು ಪ್ರಜೆಗಳ ವಿರೋಧವನ್ನೇ ಕಟ್ಟಿಕೊಳ್ಳುತ್ತಾನೆ. ಅಂತಹ ವಿರೋಧ ಸೂರ್ಯಸೇನನಿಗೆ ಬರಬಹುದು." ಎಂದನು.

"ಹಾಗಾದರೆ ಚಂದ್ರಸೇನನದು ಸರಿಯೋ ?" ಎಂದು ರಾಮದಾಸನು ಕೇಳಿದನು.

"ಹೌದು. ಅವನು ಪ್ರಜೆಗಳ ಅಭಿಮತವನ್ನು ಅನುಸರಿಸಿ ರಾಜ್ಯಪಾಲನೆ ಮಾಡುವ ರಾಜ. ಪ್ರಜೆ ಗಳ ನಂಬುಗೆಯನ್ನು ಮನ್ನಿಸಿ ದೇವಾಲಯಗಳನ್ನು ಪೋಷಿಸಿ, ದಾನಧರ್ಮಗಳು ನಡೆಯುವಂತೆ ಮಾಡು ತ್ತಿದ್ದಾನೆ. ಅದೇ ಉತ್ತಮ ರಾಜಲಕ್ಷಣ. ಅಲ್ಲಿ ಅನ್ಯಾಯಗಳು ನಡೆಯದಂತೆ ನೋಡಿಕೊಳ್ಳುವುದು ಬಹು ಮುಖ್ಯ. ನೋಡಿಕೊಂಡಾನು. ಅಂತೂ ನನ್ನ ಉತ್ತಮ ಶಿಷ್ಯನು ಅವನೇ" ಎಂದನು ಕಮಲಾನಂದ.





# ಮಂತ್ರಿಯ ಹೊಣೆ

ಆನಂದಗಿರಿ ರಾಜ್ಯದ ರಾಜನಾಗಿ ಕುಮಾರವರ್ಮನು ಪಟ್ಟಾಭಿಷೇಕ ಮಾಡಿಸಿಕೊಂಡು ಪರಿಪಾಲನೆಗೆ ಪ್ರಾರಂಭಿಸಿದ ಕಾಲದಲ್ಲಿ, ಆರ್ಥಿಕ ಪರಿಸ್ಥಿತಿ ಏನೂ ಚೆನ್ನಾಗಿರಲಿಲ್ಲ, ಅದಕ್ಕೆ ಮೊದಲು ಅವನ ತಂದೆ ಶತ್ರು ರಾಜರೊಂದಿಗೆ ಯುದ್ಧ ಮಾಡಿದ ಕಾರಣ ದಿಂದ ಖಜಾನೆ ಪೂರ್ತಿ ಖಾಲಿಯಾಗಿ ಹೋಗಿತ್ತು. ಈ ಸಂಗತಿ ಬಹಿರಂಗವಾಗದಂತೆ ಉಪಾಯವಾಗಿ ಖಜಾನೆ ತುಂಬಿಸಬೇಕಾದುದು ಪ್ರಥಮ ಕರ್ತವ್ಯವಾಗಿತ್ತು.

ಆರ್ಥಿಕ ಪರಿಸ್ಥಿತಿಯನ್ನು ಸರಿಪಡಿಸುವ ವಿಷಯವಾಗಿ ಕುಮಾರವರ್ಮನು ಮಂತ್ರಿಯಾದ ಮುಕುಳಶರ್ಮನೊಂದಿಗೆ ಆಲೋಚನೆ ಮಾಡಿದನು.

ಅದರ ಫಲಿತವಾಗಿ ಪ್ರಜೆಗಳ ಮೇಲೆ ಹೊಸ ತೆರಿಗೆ ಹಾಕದೆ ಗತ್ಯಂತರವಿಲ್ಲವೆಂದು ರಾಜನು ನಿಶ್ಚಯಿಸಿದನು. ಎಂತಹ ಇಕ್ಕಟ್ಟಿನ ಪರಿಸ್ಥಿತಿಯ ಕಾರಣದಿಂದಾಗಿ ಈ ತೆರಿಗೆಗಳನ್ನು ಹಾಕಬೇಕಾಗಿ ಬಂದಿತೆಂಬುದನ್ನು ಪ್ರಜೆಗಳು ನಂಬುವ ಹಾಗೆ ರಾಜನು ಸ್ವತಃ ಪ್ರಜೆಗಳಿಗೆ ತಿಳಿಯಪಡಿಸುವುದಾಗಿ ಅಭಿಪ್ರಾಯಪಟ್ಟನು.

ಅದಕ್ಕೆ ಮುಕುಳಶರ್ಮನು, "ಹೊಸ ತೆರಿಗೆಗಳನ್ನು ಹಾಕಿದುದರ ಕಾರಣ ಮುಂತಾದುವನ್ನೆಲ್ಲ ನೀವೇ ಸ್ವತಃ ತಿಳಿಯಪಡಿಸಬಾರದು ಪ್ರಭೂ, ಆ ಪ್ರಯತ್ನವನ್ನೆಲ್ಲ ಉದ್ಯೋಗಸ್ಥರಿಗೆ ಬಿಟ್ಟುಬಿಡಬೇಕು. ಅವರೇ ಜಾಗರೂಕತೆಯಿಂದ ನೋಡಿಕೊಳ್ಳುತ್ತಾರೆ" ಎಂದು ಸಲಹೆ ನೀಡಿದನು.

ಮಂತ್ರಿಯ ಪರಿಪಾಲನಾ ದಕ್ಷತೆಯಲ್ಲಿ ನಂಬುಗೆಯುಳ್ಳ ರಾಜನು, ಅದಕ್ಕೆ ಒಪ್ಪಿಕೊಂಡು ಮಂತ್ರಿಯ ಮೇಲೆ ಭಾರ ಬಿಟ್ಟು ಸುಮ್ಮನಾದನು.

ಮುಂದೆ ಕೆಲವು ತಿಂಗಳು ಕಳೆದುವು, ಚಳಿಗಾಲ ಬಂದಿತು. ಒಂದು ದಿನ ರಾತ್ರಿ ರಾಜನೂ ಮಂತ್ರಿಯೂ ಊರ ಮನುಷ್ಯರ ಹಾಗೆ ವೇಷ ಹಾಕಿಕೊಂಡು, ನಗರದೊಳಗೆ ಸಂಚಾರ ಹೊರಟರು. ಒಂದು ಕಡೆಯಲ್ಲಿ ಬೆಂಕಿ ಉರಿಸಿಕೊಂಡು ಕೆಲವರು ಅದರ ಸುತ್ತಲೂ ಕುಳಿತು ಚಳಿ ಕಾಯಿಸಿಕೊಳ್ಳುತ್ತಿದ್ದರು. ರಾಜನೂ ಮಂತ್ರಿಯೂ ಅವರ ಹತ್ತಿರ ಹೋಗಿ ತಾವೂ ಕುಳಿತರು.

ಚಳಿ ಕಾಯಿಸಿಕೊಳ್ಳುವವರು ಲೋಕಾಭಿರಾಮವಾಗಿ ಮಾತಾಡುತ್ತಿದ್ದರು. ರಾಜನು ಹೊಸತಾಗಿ

ಜಿ. ರತ್ನ




ಒಂದು ಪ್ರಶ್ನೆಯನ್ನು ಮಾಡಲು, ಅವರಲ್ಲಿದ್ದ ಒಬ್ಬ ಮುದುಕನು, "ಅದೇನು ಕೇಳುವಿರಿ ಬಿಡಿ! ನಾವು ಈಗ ಸಲ್ಲಿಸುವಷ್ಟು ದೊಡ್ಡ ತೆರಿಗೆಗಳನ್ನು ಈ ಮೊದಲು ಈ ರಾಜ್ಯದಲ್ಲಿ ಎಂದೂ ಕೊಟ್ಟಿರಲಿಲ್ಲ. ಈಗಿನ ತೆರಿಗೆಗಳಿಗೆ ಹದ್ದುಬಸ್ತೇ ಇಲ್ಲದೆ ಹೋಗಿದೆ. ಉದ್ಯೋಗಸ್ಥರು ಜನರನ್ನು ಬೆದರಿಸಿ ಹೆದರಿಸಿ ವಸೂಲು ಮಾಡುತ್ತಾರೆಯೇ ಹೊರತು, ನಮ್ಮ ಗೋಳು ಸ್ವಲ್ಪ ಮಹಾರಾಜರಿಗೆ ಹೇಳಿರಪ್ಪಾ ಅಂದರೆ, ಸುಮ್ಮನೆ ಹೂಂ ಹೂಂ ಎಂದು ಹೋಗಿಬಿಡುತ್ತಾರೆ" ಎಂದು ಹೊಸ ತೆರಿಗೆಗಳನ್ನು ಕಟ್ಟಲಾಗದೆ ಪ್ರಜೆಗಳು ಪಡುವ ಅವಸ್ಥೆಯನ್ನು ಕುರಿತು ಹೇಳತೊಡಗಿದನು.

ಸ್ವಲ್ಪಹೊತ್ತು ಅಲ್ಲಿ ಕುಳಿತಿದ್ದು, ಆಮೇಲೆ ರಾಜನೂ ಮಂತ್ರಿಯೂ ಅಲ್ಲಿಂದ ಎದ್ದು ಹೊರಟುಹೋದರು.

ಮಂತ್ರಿ ರಾಜನೊಂದಿಗೆ "ನೋಡಿದಿರಾ ಪ್ರಭೂ! ತೆರಿಗೆಗಳನ್ನು ವಿಧಿಸಿದವರು ನೀವೇ ಆದರೂ ಪ್ರಜೆಗಳ ಕೋಪವು ಮಾತ್ರ ಅವುಗಳನ್ನು ವಸೂಲು ಮಾಡುವ ಉದ್ಯೋಗಸ್ಥರ ಮೇಲೆಯೇ ಹೋಗುತ್ತದೆ" ಎಂದನು ನಗುತ್ತ.

ರಾಜನು ಸ್ವಲ್ಪ ಹೊತ್ತು ಆಲೋಚಿಸಿ, "ಅದೇನಾದರೂ ಪ್ರಜೆಗಳಲ್ಲಿ ಅಸಂತೃಪ್ತಿ ಹೆಚ್ಚುವುದೆಂಬುದು ಸ್ಪಷ್ಟ ತಿಳಿಯಿತು. ಈಗ ಮಾಡಬೇಕಾದುದೇನೆಂಬುದನ್ನು ನಿಶ್ಚಯಿಸಬೇಕು" ಎಂದನು.

"ತಾವು ಆತುರ ಪಡಬೇಕಾಗಿಲ್ಲ ಪ್ರಭೂ. ನಾನು ಲೆಕ್ಕ ನೋಡುತ್ತಾ ಇದ್ದೇನೆ, ಈಗ ಖಜಾನೆಯು ಕೊರತೆಯೇ ಇಲ್ಲ. ಎಲ್ಲದರಲ್ಲಿಯೂ ಭರ್ತಿಯಾಗಿ ತುಂಬಿದೆ. ನೀವು ಒಪ್ಪಿಗೆ ಕೊಟ್ಟರೆ ಇನ್ನು ಹೆಚ್ಚಿನ ತೆರಿಗೆಗಳನ್ನು ರದ್ದುಮಾಡಿಬಿಡಬಹುದು" ಎಂದನು ಮಂತ್ರಿ ಮುಕುಳಶರ್ಮ.

ಕುಮಾರವರ್ಮ ರಾಜನು ಸಂತೋಷದ ಅರಳ್ಮೊಗ ಮಾಡಿಕೊಂಡು, "ಹಾಗೇನು! ಇದನ್ನೇಕೆ ಮೊದಲೇ ತಿಳಿಸಿಲ್ಲ? ಹಾಗಾದರೆ ಹೊಸ ತೆರಿಗೆಗಳೆಲ್ಲಾ ರದ್ದುಪಡಿಸಿದಂತೆ ಉದ್ಯೋಗಸ್ಥರ ಮೂಲಕವಾಗಿ ಕೂಡಲೇ ತಿಳಿಯಪಡಿಸಿಬಿಡಿ. ತಡಮಾಡಬಾರದು" ಎಂದನು.

ಅದನ್ನು ಕೇಳಿ ಮುಕುಳಶರ್ಮನು ಮುಗುಳು ನಗುತ್ತ, ಪ್ರಭುಗಳೇ, ತಮಗೆ ತಿಳಿಸುವ ಕಾಲ ಈಗಷ್ಟೇ ಬಂದಿದೆ. ಈ ವಿಷಯವನ್ನು ಉದ್ಯೋಗಸ್ಥರಿಗೆ ಒಪ್ಪಿಸುವುದು ಸರಿಯಲ್ಲ. ತಾವೇ ಸ್ವತಃ ಪ್ರಜೆಗಳಿಗೆ ತಿಳಿಯಪಡಿಸಿದರೇನೇ ಒಳ್ಳೆಯದು ಪ್ರಭು" ಎಂದನು.

ರಾಜನು ಆಶ್ಚರ್ಯದಿಂದ ಮಂತ್ರಿಯ ಮುಖವನ್ನು ನೋಡಿದನು.

ಅದರ ಅರ್ಥವನ್ನು ತಿಳಿದ ಮಂತ್ರಿ, "ಹೌದು ಪ್ರಭು. ಹೊಸ ತೆರಿಗೆಗಳನ್ನು ಏಕೆ ವಿಧಿಸಬೇಕಾಗಿ ಬಂತೆಂಬುದನ್ನು, ತಾವೇ ಪ್ರಜೆಗಳಿಗೆ ತಿಳಿಸುವೆನೆಂದಾಗ ಬೇಡವೆಂದು ವಾದಿಸಿದೆನು. ತಮ್ಮದು

ಎಂತಹ ಸದುದ್ದೇಶವಾದರೂ, ಹೊಸ ತೆರಿಗೆಗಳೆಂದರೆ ಪ್ರಜೆಗಳಿಗೆ ಅದೊಂದು ದುರ್ವಾರ್ತೆಗಳೆಂದೇ ಕಾಣುತ್ತದೆ" ಎಂದನು.

"ಆದರೂ ನಮ್ಮ ಉದ್ಯೋಗಸ್ಥರು ಹೇಗೋ ಮಾಡಿ ಪ್ರಜೆಗಳಿಂದ ಹೊಸ ತೆರಿಗೆ ವಸೂಲು ಮಾಡಿ ನಮ್ಮ ಖಜಾನೆ ಸಾಕಷ್ಟು ತುಂಬುವಂತೆ ಮಾಡಿದ್ದಾರೆ" ಎಂದನು ರಾಜ.

"ಆದುದರಿಂದಲೇ ಪ್ರಜೆಗಳ ಅಸಂತೃಪ್ತಿಗೆ ನೀವು ತಪ್ಪಿ ಅವರೇ ಗುರಿಯಾದರು. ರಾಜನು ಒಳ್ಳೆಯವನೆಂಬ ಪ್ರಜೆಗಳ ಅಭಿಪ್ರಾಯ ಕುಂದಲಿಲ್ಲ. ನೀವೇ ಸ್ವತಃ ಹೊಸ ತೆರಿಗೆಯ ವಿಷಯ ಪ್ರಕಟಿಸಿದ್ದರೆ, ಸಿಂಹಾಸನವೇರಿದ ಪ್ರಾರಂಭ ಕಾಲದಲ್ಲೇ ಪ್ರಜೆಗಳಲ್ಲಿ ಅಸಂತೃಪ್ತಿ ಬಂದುಬಿಡುತ್ತಿತ್ತು" ಎಂದನು ಮಂತ್ರಿ.

"ನೀವು ಹೇಳಿದುದು ತುಂಬ ಯುಕ್ತಿಯುಕ್ತವಾಗಿದೆ. ಮತ್ತೆ ಈಗ ಆ ಹೊಸ ತೆರಿಗೆಗಳ ರದ್ದು ವಿಷಯವನ್ನು ನಾನೇ ಹೇಳಬೇಕಾಗಿ ಬಂದುದರ ಮುಖ್ಯತ್ವವೇನಿದೆ ? ಅದನ್ನೂ ಉದ್ಯೋಗಸ್ಥರಿಗೇ ಒಪ್ಪಿಸಿದರಾಗದೆ ? " ಎಂದು ಕೇಳಿದನು ರಾಜ.

"ತೆರಿಗೆಗಳ ರದ್ದು ಎಂಬುದು ಪ್ರಜೆಗಳಿಗೆ ಶುಭ ವಾರ್ತೆಯಂತಹುದು. ಅದು ನಿಮ್ಮ ಮೂಲಕ ಪ್ರಕಟವಾದರೇನೇ ಪ್ರಜೆಗಳಲ್ಲಿ ನಿಮ್ಮ ಮೇಲಿನ ವಿಶ್ವಾಸ ಇಮ್ಮಡಿಯಾಗುತ್ತದೆ. ಮುಂದೆ ಕೂಡಾ ಪರಿಪಾಲನೆಯಲ್ಲಿ ಪ್ರಜೆಗಳಿಗೆ ಅಸಂತೃಪ್ತಿಯನ್ನುಂಟು ಮಾಡುವ ನಿರ್ಣಯಗಳನ್ನು ಮಾಡಿದಾಗ ಅವುಗಳನ್ನು ಅಮಲುಪಡಿಸುವ ಬಾಧ್ಯತೆಯನ್ನು ಉದ್ಯೋಗಸ್ಥರಿಗೇ ಬಿಡಬೇಕು. ಹಾಗೆಯೇ ಪ್ರಜೆಗಳು ಹರ್ಷಿಸುವಂತಹ ನಿರ್ಣಯಗಳೆಲ್ಲವನ್ನೂ ನೀವೇ ಮುಂದೆ ಬಂದು ಪ್ರಕಟಿಸಬೇಕು. ಈ ಬಗೆಯ ಮಂತ್ರಾಂಗಗಳಿಂದ ಪರಿಪಾಲನೆಯನ್ನು ಸಾಗಗೊಳಿಸುವುದು ರಾಜ್ಯದ ಹಾಗು ರಾಜನ ಹಿತಚಿಂತಕನಾದ ಮಂತ್ರಿಯ ಬಾಧ್ಯತೆಯಾದುದರಿಂದಲೇ ಹೀಗೆ ಹೇಳುತ್ತೇನೆ. ರಾಜನಾದವನು ಪ್ರಜೆಗಳ ತೃಪ್ತಿ ಅತೃಪ್ತಿಗಳನ್ನು ಸರಿಯಾದ ತೂಕದಲ್ಲಿ ಇಟ್ಟುಕೊಂಡಿರಬೇಕಾಗುತ್ತದೆ. ಅದನ್ನು ನೋಡಿಕೊಳ್ಳುವುದು ಮಂತ್ರಿಯ ಹೊಣೆ" ಎಂದನು ಮಹಾಮಂತ್ರಿ ಮುಕುಳಶರ್ಮ.

ತನ್ನ ಮಂತ್ರಿಯ ಪ್ರತಿಭೆ, ವಿಜ್ಞತೆಗಳಿಗೆ ಕುಮಾರವರ್ಮ ರಾಜನು ಮನಸ್ಸಿನಲ್ಲೇ ಅಭಿನಂದಿಸಿದನು. ಮರುದಿನ ಪ್ರಜೆಗಳ ಹರ್ಷಧ್ವಾನಗಳ ನಡುವೆ ತಾನು ಹೊಸದಾಗಿ ವಿಧಿಸಿದ ತೆರಿಗೆಗಳನ್ನು ರದ್ದು ಪಡಿಸಿರುವುದಾಗಿ ಪ್ರಕಟಿಸಿದನು.

ಹೀಗೆ ಅನೇಕ ವರ್ಷಗಳವರೆಗೆ ಸುಗಮವಾಗಿ ರಾಜ್ಯಭಾರ ಮಾಡಿಕೊಂಡಿದ್ದನು ಆ ರಾಜ.





# ಲೋಕದ ರೀತಿ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಕೌಶಾಂಬಿ ನಗರದ ಕೃಷ್ಣದ್ವೈಪಾಯನನೆಂಬ ಧನಿಕ ಬ್ರಾಹ್ಮಣ ಮನೆತನದಲ್ಲಿ ಜನ್ಮ ತಾಳಿದ್ದನು. ಅವನು ಬೆಳೆದು ಪ್ರಾಯ ಪ್ರಬುದ್ಧನಾದ ಮೇಲೆ ಲೌಕಿಕ ವ್ಯವಹಾರಗಳಲ್ಲಿ ಬೇರೆ ಬೇರೆ ಅನರ್ಥಗಳನ್ನು ನೋಡಿ, ವೈರಾಗ್ಯವನ್ನು ತಾಳಿದನು.

ಅದರಿಂದಾಗಿ ಇರುವ ಆಸ್ತಿಪಾಸ್ತಿಗಳನ್ನೆಲ್ಲಾ ದಾನಧರ್ಮಗಳಿಂದ ಖರ್ಚುಮಾಡಿ ಸನ್ಯಾಸವನ್ನು ಹಿಡಿದು ಹೊರಟುಬಿಟ್ಟನು. ಹೊರಟವನು ಸೀದಾ ಹಿಮಾಲಯ ಪರ್ವತಕ್ಕೆ ಹೋಗಿ ಐವತ್ತು ವರ್ಷಗಳವರೆಗೆ ತಪಸ್ಸು ಮಾಡಿದನು. ಆದರೆ ಗೆಡ್ಡೆಗೆಣಸು ಚಿಗುರೆಲೆಗಳನ್ನು ತಿನ್ನುತ್ತ ಅನೇಕ ಶರೀರ ಬಾಧೆಗಳಿಗೆ ಗುರಿಯಾಗಿ ಆಗಾಗ ಅವನ ತಪಸ್ಸಿನ ಏಕಾಗ್ರತೆ ಕೆಟ್ಟಿತು. ಆದರೂ ಹಟ ಬಿಡದೆ ಅವನು ಮಾಡಿದ ತಪಸ್ಸಿನಿಂದ ಯಾವ ಸಿದ್ಧಿಯನ್ನೂ ಪಡೆಯಲಾಗದೆ ಹೋದನು.

ಆಮೇಲೆ ಬೇಸತ್ತು, ತಪಸ್ಸಿನ ಗೊಡವೆ ಬಿಟ್ಟು, ಕೃಷ್ಣದ್ವೈಪಾಯನನು ಹಿಮಾಲಯವನ್ನು ತ್ಯಜಿಸಿ, ಕ್ಷೇತ್ರಾಟನೆಗೆ ತೊಡಗಿದನು. ತೀರ್ಥಯಾತ್ರೆ ಮಾಡುತ್ತ ಕಾಶೀ ರಾಜ್ಯಕ್ಕೆ ಬಂದನು.

ಅಲ್ಲಿ ಅವನಿಗೆ ಬಾಲ್ಯ ಮಿತ್ರನಾದ ಮಾಂಡವ್ಯನೆಂಬವನು ಒಂದು ಗ್ರಾಮದಲ್ಲಿ ನೋಡಲು ಸಿಕ್ಕಿದನು. ಮಾಂಡವ್ಯನು ಕೃಷ್ಣದ್ವೈಪಾಯನನನ್ನು ತನ್ನಲ್ಲಿಯೇ ಇರಬೇಕೆಂದು ಕೇಳಿಕೊಂಡನು. ಅವನಿಗಾಗಿ ಉತ್ತಮ ರೀತಿಯ ಒಂದು ಪರ್ಣಕುಟೀರವನ್ನೂ ಕಟ್ಟಿಸಿಕೊಟ್ಟನು. ಅವನಿಗೆ ಬೇಕಾದ ಅಗತ್ಯ ವಸ್ತುಗಳನ್ನೂ ಒದಗಿಸಿದನು. ಅಂತಹ ಮಿತ್ರನ ಒತ್ತಾಯಕ್ಕೊಳಗಾಗಿ ಕೃಷ್ಣದ್ವೈಪಾಯನನು ಆ ಪರ್ಣಶಾಲೆಯಲ್ಲೇ ಧ್ಯಾನಮಗ್ನನಾಗಿ ಇರತೊಡಗಿದನು.

ಒಂದು ದಿನ ಮಾಂಡವ್ಯನ ಕುಮಾರನಾದ ಯಜ್ಞದತ್ತನೆಂಬ ಹುಡುಗನು, ಚೆಂಡನ್ನು ಹಾರಿಸಿ ಆಡಿಕೊಂಡಿದ್ದನು. ಅವನು ಆಟದ ಉತ್ಸಾಹದಲ್ಲಿ ಬೀಸಿ ಹಾರಿಸಿದಾಗ, ಚೆಂಡು ಹಾರಿಹೋಗಿ ಒಂದು ಹಾವಿನ ಹುತ್ತದೊಳಗೆ ಬಿದ್ದಿತು.

ಆ ಹುತ್ತದೊಳಗೆ ಹಾವು ಇರುವ ಸಂಗತಿ ತಿಳಿಯದೆ ಹುಡುಗ ಯಜ್ಞದತ್ತನು ಚೆಂಡನ್ನು ಎತ್ತಿ



ಕೊಳ್ಳಲು ಹುತ್ತದೊಳಗೆ ಕೈ ಹಾಕಿದನು. ಕೂಡಲೇ ಹಾವು ಅವನ ಕೈಯನ್ನು ಕಡಿಯಿತು. ಕಿಟ್ಟದನಿಯಿಂದ ಕಿರಿಚಿಬಿದ್ದನು ಯಜ್ಞದತ್ತ. ಬೇಗದಲ್ಲೇ ವಿಷವೇರಿ ಯಜ್ಞದತ್ತನಿಗೆ ಜ್ಞಾನ ತಪ್ಪಿಹೋಯಿತು.

ತನ್ನ ಕುಮಾರನ ಪರಿಸ್ಥಿತಿ ಪ್ರಾಣಾಂತಿಕವಾದು ದನ್ನು ನೋಡಿ ಮಾಂಡವ್ಯನೂ ಅವನ ಹೆಂಡತಿಯೂ ತಲ್ಲಣಿಸಿದರು. ಮಾಂಡವ್ಯನು ಕೂಡಲೇ ತನ್ನ ಮಗನನ್ನು ಕೈಗಳಲ್ಲಿ ಎತ್ತಿಕೊಂಡು, ದೊಡ್ಡ ದುಃಖ ದಿಂದ ಪರ್ಣಕುಟೀರಕ್ಕೆ ತಂದು ಕೃಷ್ಣದ್ವೈಪಾಯನನ ಕಾಲುಗಳ ಮುಂದೆ ಮಲಗಿಸಿದನು. ಗಾಬರಿಯಿಂದ ಏನಾಯಿತೆಂದು ಕೇಳಿದನು ಕೃಷ್ಣದ್ವೈಪಾಯನ.

"ಅಯ್ಯಾ, ತಪೋಧನರೇ ! ನೀವಿರುವ ಪ್ರಾಂತ ದಲ್ಲಿ ಆಗಬಾರದ್ದು ಆಯಿತು. ನಿಮ್ಮ ತಪಶ್ಶಕ್ತಿ ಯಿಂದ ಇವನನ್ನು ಬದುಕಿಸಿ, ನಮಗೆ ಪುತ್ರಭಿಕ್ಷೆ ನೀಡಬೇಕು" ಎಂದು ಆ ದಂಪತಿಗಳು ಪ್ರಾರ್ಥಿಸಿ ಕೊಂಡರು. ನಡೆದ ಸಂಗತಿಯನ್ನೂ ಹೇಳಿ "ನಿಮ್ಮನ್ನೇ ನಂಬಿರುವೆವು" ಎಂದರು.

ಕೃಷ್ಣದ್ವೈಪಾಯನನಿಗೆ ಏನು ಮಾಡಬೇಕೆಂಬುದೇ ಗೊತ್ತಾಗಲಿಲ್ಲ. "ನೀವು ತಪ್ಪಾಗಿ ತಿಳಿದಿದ್ದೀರಿ. ನನ್ನಲ್ಲಿ ಯಾವ ಶಕ್ತಿಯೂ ಇಲ್ಲ. ನಾನು ವರ್ಷಾನು ಗಟ್ಟಲೆ ಕಾಲ ತಪಸ್ಸು ಮಾಡಿದ್ದೇನೋ ನಿಜವೇ ಆದರೂ, ಆ ತಪಸ್ಸು ಸ್ವಲ್ಪವೂ ಸಿದ್ಧಿಸಲಿಲ್ಲ. ಕಡೇ ಪಕ್ಷ ನನಗೆ ಮದ್ದು ಮೂಲಿಕೆಗಳ ವಿಷಯವೂ ತಿಳಿಯದು. ಇಂಥ ನಿರುಪಯೋಗಿಯಾದ ನಾನು ನಿಮಗೆ ಏನು ತಾನೇ ಸಹಾಯಮಾಡಲು ಸಾಧ್ಯ ? ನಿಮ್ಮ ಮಗನನ್ನು ಹೇಗೆತಾನೇ ಬದುಕಿಸಲಿ ?" ಎಂದನು ಚಿಂತಿಸುತ್ತಾ.

"ನಿಮಗೆ ತಪಸ್ಸು ಸಿದ್ಧಿಸದೆ ಹೋದರೂ ಅಷ್ಟು ಕಾಲ ಮಾಡಿದ ತಪಸ್ಸಿನ ಫಲವು ಸ್ವಲ್ಪಮಟ್ಟಿ ಗಾದರೂ ಇಲ್ಲದೆ ಹೋಗದು. ನೀವು ಸತ್ಯ ಪ್ರಮಾಣ ಮಾಡಿ ಹೇಳಿಕೊಳ್ಳಿರಿ ಸ್ವಾಮೀ! ದೇವರ ದಯದಿಂದ ಹುಡುಗ ಖಂಡಿತಾ ಬದುಕುತ್ತಾನೆ" ಎಂದನು ಮಾಂಡವ್ಯ.

ಕೃಷ್ಣದ್ವೈಪಾಯನನು ಅದಕ್ಕೆ ಸಮ್ಮತಿಸಿ ಈ ಕೆಳಗಿನಂತೆ ಹೇಳುತ್ತ ಸತ್ಯ ಪ್ರಮಾಣ ಮಾಡಿದನು.

"ಸತ್ತಾಹಂ ಏವಾಹಂ ಪ್ರಸನ್ನ ಚಿತ್ತೋ
ಪುಞ್ಞತ್ಥಿಕೋ ಅಚರಂ ಬ್ರಹ್ಮಚರ್ಯಂ
ಅಥಾವರಂ ಯಂ ಚರಿತಂ ಮಮಯಿದಂ
ವಸ್ಸಾನಿ ಸಂಜ್ಞಾನ ಸಮಾಧಿಕಾನಿ
ಅಕಾಮಕೋ ವಾ ಹಿ ಅಹಂ ಚರಾಮಿ
ಏ ತೇನ ಸಚ್ಚೇನ ಸುವತ್ಥಿ ಹೋತು
ಹತಂ ವಿಸಂ ಜೀವತು ಯಞ್ಞದತ್ತೋ"

ಅಂದರೆ "ನಾನು ಪುಣ್ಯದ ಬಯಕೆಯುಳ್ಳವನಾಗಿ ಒಂದು ವಾರ ದಿನಗಳವರೆಗೆ ನಿರ್ಮಲಚಿತ್ತದಿಂದ ಬ್ರಹ್ಮಚರ್ಯೆ ಅವಲಂಬಿಸಿದ್ದೇನೆ. ಆಮೇಲೆ ವೈರಾಗ್ಯ ಭಾವ ತಾಳಿ ನಾನು ಐವತ್ತು ವರ್ಷಗಳವರೆಗೆ ಮಾಡಿದ ತಪಶ್ಚರ್ಯೆ ಚಿತ್ತಶುದ್ಧಿಯ ಏಕಾಗ್ರತೆ



ಮಾಂಡವ್ಯನು ಇದಕ್ಕೆ ಒಪ್ಪಿಕೊಂಡು, ಈ ಕೆಳಗಿನಂತೆ ಹೇಳುತ್ತ ಸತ್ಯ ಪ್ರಮಾಣ ಮಾಡಿದನು:

"ಯಸ್ಮಾ ದಾನಂ ನ ಅಭಿನಂದಿಂ ಕದಾನಿ
ದಿರವಾನಾಹಂ ಅತಿಥಿಂ ವಾ ಸಕಾಲೇ
ನ ಚಾಪಿ ಮೇ ಅಪ್ಪಿಯಂ ಅಲೇದುಂ
ಬಹುಸ್ಸುತಾ ಸಮಣಾ ಬ್ರಾಹ್ಮಣಾ ಚ
ಅಕಾಮಕೋ ವಾ ಹಿ ಅಹಂ ದದಾಮಿ
ವಿ ತೇನ ಸಚ್ಚೇನ ಸುಪತ್ಥಿ ಹೋತು
ಹತಂ ವಿಸಂ ಜೀವತು ಯಂಜ್ಞದತ್ತೋ"

ಅರ್ಥವೇನೆಂದರೆ, "ನಾನು ಅತಿಥಿಗಳನ್ನು ಸತ್ಕರಿಸುವುದು ನಿಜವೇ ಆದರೂ ಅದು ಇಷ್ಟದಿಂದೇನೂ ಅಲ್ಲ. ಜ್ಞಾನಿಗಳಾದ ಶ್ರಮಣರೂ ಬ್ರಾಹ್ಮಣರೂ ನಾನು ಮಾಡಿದ ಆತಿಥ್ಯವು ಇಷ್ಟವಿಲ್ಲದೆ ಮಾಡಿದ್ದೆಂದು ತಿಳಿದುಕೊಳ್ಳಲಿಲ್ಲ. ನಾನು ದಾನಗಳನ್ನು ಕೂಡಾ ಇಷ್ಟವಿಲ್ಲದೇನೇ ಮಾಡಿದ್ದಾಗಿದೆ. ಇದೊಂದು ಬಗೆಯ ಮೋಸವೆಂದು ನನಗೇ ಗೊತ್ತಿದೆ. ನಾನು ಮಾಡುವ ಈ ಸತ್ಯ ಪ್ರಮಾಣದ ಫಲಿತವಾಗಿ ವಿಷವಿಳಿದು ಯಜ್ಞದತ್ತನು ಬದುಕಿ ಏಳಬೇಕು."

ಮಾಂಡವ್ಯನು ಈ ವಿಧವಾಗಿ ಸತ್ಯ ಪ್ರಮಾಣ ಮಾಡಿದ ಕೂಡಲೇ ಯಜ್ಞದತ್ತನ ಬೆನ್ನಿನಿಂದ ಮತ್ತೆ ಸ್ವಲ್ಪ ವಿಷವು ಹೊರಗೆ ಬಂದು ನೆಲಕ್ಕಿಳಿದು ಇಂಗಿತು. ಹುಡುಗನು ಮೆಲ್ಲನೆ ಎದ್ದು ಕುಳಿತನು. ಆದರೆ ನಿಂತುಕೊಳ್ಳಲಾಗದೆ ಮತ್ತೆ ನರಳಿದನು.

ಆಗ ಮಾಂಡವ್ಯನು ತನ್ನ ಹೆಂಡತಿಯನ್ನು ನೋಡಿ, "ನೀನು ಕೂಡಾ ದೇವರನ್ನು ನಂಬಿ ಯಾವ ಮುಚ್ಚುಮರೆಯೂ ಇಲ್ಲದೆ ಸತ್ಯಪ್ರಮಾಣ ಮಾಡಿಬಿಡು. ನಮ್ಮ ಹುಡುಗನ ಪೂರ್ತಿ ವಿಷವಿಳಿದು ನಡೆಯಲು ಸಾಧ್ಯವಾದೀತು" ಎಂದನು.

"ನಾನು ಪ್ರಕಟಿಸುವ ಸತ್ಯವೊಂದು ಇದ್ದರೂ ಅದನ್ನು ನಿಮ್ಮ ಇದಿರಿನಲ್ಲಿ ಹೇಳಲು ಸಾಧ್ಯವಿಲ್ಲ. ಏನು ಮಾಡಲಿ?" ಎಂದಳು ಮಾಂಡವ್ಯನ ಹೆಂಡತಿ.

ಯಿಂದ ಮಾಡಿದ್ದೇನೂ ಅಲ್ಲ. ನಾನು ಮಾಡಿದ ಈ ಸತ್ಯ ಪ್ರಮಾಣದ ಫಲಿತವಾಗಿ ಒಳ್ಳೆಯದಾಗಲಿ, ವಿಷವು ಹೋಗಲಿ, ಯಜ್ಞದತ್ತನು ಜೀವಂತನಾಗಲಿ" ಎಂದು ಅರ್ಥ.

ಕೂಡಲೇ ಹುಡುಗನ ವಕ್ಷಸ್ಥಳದಿಂದ ಸ್ವಲ್ಪ ವಿಷ ಹೊರಗೆ ಹರಿದು ನೆಲಕ್ಕೆ ಬಿದ್ದು ಇಂಗಿಹೋಯಿತು. ಅವನು ಕಣ್ಣು ತೆರೆದು ತನ್ನ ತಂದೆತಾಯಂದಿರನ್ನು ಒಂದು ಸಾರಿ ನೋಡಿದನು. ಹಾಗೆಯೇ "ಅಮ್ಮಾ" ಎಂದು ಕೂಗಿ ಪಕ್ಕಕ್ಕೆ ತಿರುಗಿ ಮತ್ತೆ ಸ್ಮೃಹೆ ತಪ್ಪಿ ಬಿದ್ದುಬಿಟ್ಟನು.

"ನೋಡಿದಿರಷ್ಟೇ? ವಿಷ ಪೂರಾ ಇಳಿಸಲು ನನ್ನಿಂದಾಗಲಿಲ್ಲ. ಮಾಂಡವ್ಯಾ, ನೀನು ಕೂಡಾ ನಿನ್ನ ಸತ್ಯವನ್ನು ಪ್ರಮಾಣಪೂರ್ವಕ ಹೇಳಿಬಿಡು. ಫಲಿತ ಸಿಕ್ಕಿದರೂ ಸಿಗಬಹುದು. ಏಕೆಂದರೆ ಸತ್ಯದ ಶಕ್ತಿ ಬಹು ದೊಡ್ಡದು." ಎಂದು ಕೃಷ್ಣದ್ವೈಪಾಯನನು ಹೇಳಿದನು.

"ಹುಚ್ಚಳೇ! ಅದು ದೊಡ್ಡ ತಪ್ಪು. ಏಕೆ ಸಂದೇಹ ಪಡುವಿ? ನಮ್ಮ ಮಗನು ಬದುಕುವುದಕ್ಕಿಂತಲೂ ಹೆಚ್ಚು ನಮಗೇನು ಬೇಕಾಗಿದೆ? ಮನಸ್ಸು ತೆರೆದು ಸತ್ಯ ಪ್ರಮಾಣ ಮಾಡಿಬಿಡು" ಎಂದು ಮಾಂಡವ್ಯನು, ತನ್ನ ಹೆಂಡತಿಗೆ ಧೈರ್ಯ ಹೇಳಿದನು. ಅವಳು ಮನಸ್ಸು ಗಟ್ಟಿಮಾಡಿ ಈ ಕೆಳಗಿನ ವಿಧವಾಗಿ ತನ್ನ ಸತ್ಯವನ್ನು ಹೇಳಿದಳು:

"ಆಸೋ ವಿಸೋ ತಾತ ಪಹೂತ ತೇಜೋ
ಯೇತಂ ಅದಟ್ಠೆ ಪತರಾ ಇದಟ್ಠ
ತಸ್ಮಿಂ ಚ ಮೇ ಅಪ್ಪಿಯತಾಯ ಅಜ್ಜ
ಪಿತರಿ ಚ ತೇ ನತ್ಥಿ ಕೋಚಿ ವಿಸೇಸೋ
ಏತೇನ ಸಚ್ಚೇನ ಸುಪತ್ಥಿ ಹೋತು
ಹತಂ ವಿಸಂ ಜೀವತು ಯಂಜ್ಞದತ್ತೋ"

ಇದರ ಅರ್ಥವೇನೆಂದರೆ: "ಈ ದಿನ ಆ ಹುತ್ತದಲ್ಲಿ ನಿನ್ನನ್ನು ಕಡಿದ ಸರ್ಪವನ್ನು ನೋಡಿದರೆ ನನಗೆ ಎಷ್ಟು ಅಸಹ್ಯವೋ, ನಿನ್ನ ತಂದೆಯನ್ನು ನೋಡಿದರೂ ಅಷ್ಟೇ ಅಸಹ್ಯ. ನನಗೆ ಈ ಇಬ್ಬರಲ್ಲಿ ವ್ಯತ್ಯಾಸವೇನೂ ಇಲ್ಲ. ನಾನು ಮಾಡಿದ ಈ ಸತ್ಯ ಪ್ರಮಾಣದ ಫಲಿತವಾಗಿ ವಿಷವೆಲ್ಲಾ ಇಳಿದು ಯಜ್ಞದತ್ತನು ಬದುಕಲಿ!"

ಅವಳು ಸತ್ಯ ಪ್ರಮಾಣ ಹೇಳಿದ ಕೂಡಲೇ ಯಜ್ಞದತ್ತನ ಶರೀರದೊಳಗಿನ ವಿಷವು ಪೂರ್ತಿಯಾಗಿ ಹೊರಗೆ ಬಂದು ನೆಲದಲ್ಲಿ ಇಂಗಿಹೋಯಿತು. ಅವನು ಎದ್ದು ಎಂದಿನಂತೆ ಆಡತೊಡಗಿದನು.

ಮಾಂಡವ್ಯನು ಕೃಷ್ಣದ್ವೈಪಾಯನನ ಕಡೆಗೆ ತಿರುಗಿ, "ಸ್ವಾಮಿ, ನೀವು ಉತ್ತಮೋತ್ತಮವಾದ ತಪಸ್ವೀ ಜೀವಿತವನ್ನು ಸ್ವೀಕರಿಸಿ ಕೂಡಾ, ಅವನ್ನು ಇಷ್ಟವಿಲ್ಲದೆ ನಡೆಸಿಕೊಂಡಿರಲು ಕಾರಣವೇನೋ?" ಎಂದು ಕೇಳಿದನು.

ಅದಕ್ಕೆ ಕೃಷ್ಣದ್ವೈಪಾಯನನು, "ಒಂದೇ ಕಾರಣ ಅದಕ್ಕಿದೆ. ಒಂದು ಸಾರಿ ಸನ್ಯಾಸ ಸ್ವೀಕರಿಸಿ ಹೊರಟು ಹೋದವನು, ಮತ್ತೆ ಸಂಸಾರದೊಳಗೆ ಕಾಲಿಟ್ಟರೆ ಎಲ್ಲರೂ ಅವಹೇಳನೆ ಮಾಡುತ್ತಾರೆ. ಮೂಢನೆಂದು ನಗುತ್ತಾರೆ. ಆದುದರಿಂದ ತಪಸು



ನನಗೆ ಇಷ್ಟವಿಲ್ಲದೆ ಹೋದರೂ, ಎಲ್ಲರೂ ನನ್ನನ್ನು ಗೌರವದಿಂದ ನೋಡಿಕೊಳ್ಳಲಿಕ್ಕಾಗಿ ನಾನು ತಪಸ್ವಿಯಾಗಿಯೇ ಇದ್ದುಬಿಟ್ಟೆನು. ಮತ್ತೆ ನೀನು ಅತಿಥಿ ಅಭ್ಯಾಗತರಿಗೆ ಇಷ್ಟು ಒಳ್ಳೆಯ ರೀತಿಯಲ್ಲಿ ಆತಿಥ್ಯ ಕೊಡುವಿಯಷ್ಟೆ? ಅದೆಲ್ಲಾ ಇಷ್ಟವಿಲ್ಲದೆಯೇ ಮಾಡಬೇಕಾದ ಕಾರಣವೇನಿದೆ?" ಎಂದು ಕೇಳಿದನು.

"ನನ್ನ ಅಜ್ಜನೂ ತಂದೆಯೂ ಜಗತ್ಪ್ರಸಿದ್ಧರಾದ ದಾನಗುಣದವರು. ಆದುದರಿಂದ ನಾನು ಕೂಡಾ ಅವರ ದಾರಿಯನ್ನೇ ಅನುಸರಿಸಬೇಕಾಗಿ ಬಂತು. ಹಾಗೆ ಮಾಡದಿದ್ದರೆ ಅವರ ಹೆಸರಿಗೆ ಕಳಂಕ ತಂದೆನೆಂದು ಜನರು ಹೇಳಿಕೊಳ್ಳುತ್ತಾರೆ. ಅದಕ್ಕಾಗಿ ನಾನು ದೊಡ್ಡ ರೀತಿಯಲ್ಲಿ ದಾನ ಧರ್ಮ ಮಾಡುತ್ತೇನೆ. ನನಗೆ ಅವುಗಳ ಮೇಲೆ ಒಂದಿಷ್ಟೂ ಇಷ್ಟವಿಲ್ಲ" ಎಂದು ಹೇಳಿ ಹೆಂಡತಿಯ ಕಡೆಗೆ ತಿರುಗಿ, "ಚಿಕ್ಕತನದಲ್ಲಿಯೇ ನೀನು ನನ್ನ ಹೆಂಡತಿಯಾಗಿ ನನ್ನ ಮನೆಗೆ ಬಂದವಳು. ಇಷ್ಟು ವರ್ಷಗಳವರೆಗೆ ನನ್ನೊಂದಿಗೆ ಸಂಸಾರ ಮಾಡಿದವಳು. ನನ್ನ ಮೇಲೆ ಪ್ರೇಮಾಭಿಮಾನಗಳೇನೂ ನಿನಗಿಲ್ಲದೆ ಹೋದುದರಿಂದ ನಿನ್ನ ಜೀವಿತವೆಲ್ಲಾ ಅಸಹ್ಯವೇ ಆಗಿದೆಯೆಂದು ತಿಳಿಯಿತು. ಅದನ್ನೆಲ್ಲಾ ಏಕೆ ಸಹಿಸಿಕೊಂಡೆ?" ಎಂದು ಕೇಳಿದನು.

ಅದಕ್ಕೆ ಅವನ ಹೆಂಡತಿ: "ನಮ್ಮ ವಂಶದಲ್ಲಿ ಸ್ತ್ರೀಯಾದವಳು ಗಂಡನೊಂದಿಗೆ ಸಂಸಾರ ಮಾಡಬೇಕಾದುದೇ ವಿಧಿ. ಆದುದರಿಂದ ನನ್ನ ಜೀವಿತದ ಅಸಹ್ಯವನ್ನು ಸಹಿಸಿಕೊಂಡಿದ್ದೆನು. ನಾನು ನಿಮ್ಮನ್ನು ಬಿಟ್ಟು, ಇನ್ನೊಬ್ಬನನ್ನು ಸೇರಿಕೊಂಡುಬಿಟ್ಟರೆ ಲೋಕವು ನನ್ನನ್ನು ಕುಲಟೆ ಎಂದು ಹೀಯಾಳಿಸುತ್ತದೆ. ಈಗ ನಮ್ಮ ಮಗನ ಕ್ಷೇಮದ ಅಪೇಕ್ಷೆಯಿಂದಲೇ ನಾನು ಈ ವಿಷಯವನ್ನು ಬಯಲು ಮಾಡಿದೆನು" ಎಂದು ಉತ್ತರ ಕೊಟ್ಟಳು.

"ಒಳ್ಳೆಯದು. ನಿಜ ಹೇಳುವ ಅಗತ್ಯ ಬಂದುದರಿಂದ ನಾನು ನಿನ್ನನ್ನು ನಿಂದಿಸುವುದಿಲ್ಲ. ನಮ್ಮ ಪ್ರಾಪ್ತಿ ಹೀಗೆಯೇ ಅಂದುಕೋ. ನಾನು ನಿನ್ನನ್ನು ಪ್ರೇಮದಿಂದಲೇ ನೋಡಿಕೊಳ್ಳುತ್ತೇನೆಂದು ಪ್ರಮಾಣ ಕೂಡಾ ಮಾಡುತ್ತೇನೆ. ಸತ್ಯ ಹೇಳಿದೆನೆಂದು ಚಿಂತೆ ಪಡಬೇಡ" ಎಂದನು ಮಾಂಡವ್ಯ.

"ನೀನು ದಾನಗಳನ್ನು ಮಾಡುವುದಾದರೆ ಇಷ್ಟಪಟ್ಟೇ ಮಾಡಬೇಕಲ್ಲದೆ, ಇಷ್ಟವಿಲ್ಲದೆ ಮಾಡಬೇಡ. ನಾನೂ ಕೂಡಾ ಇನ್ನು ಮೇಲೆ ಈ ತಾಪಸ ಜೀವಿತವನ್ನು ಮನಃಪೂರ್ವಕವಾಗಿ ಸಾಧಿಸುತ್ತೇನೆ" ಎಂದು ಹೇಳಿ ಕೃಷ್ಣದ್ವೈಪಾಯನನು, ಮಾಂಡವ್ಯನಿಂದ ಅಪ್ಪಣೆ ಪಡೆದುಕೊಂಡು ತಪಸ್ಸಿಗೆ ಹೊರಟುಹೋದನು.





## ನಮ್ಮ ನದಿಗಳು :

# ಯಮುನೆ

ಮಹಾಕವಿ ಕಾಳಿದಾಸನು 'ದೇವತಾತ್ಮ'ನೆಂದೂ, 'ಪರ್ವತರಾಜ'ನೆಂದೂ ಅಭಿವರ್ಣಿಸಿದ ಹಿಮಾಲಯ ಪರ್ವತ ಶಿಖರಗಳಿಂದಲೇ ಅನೇಕವಾದ ನಮ್ಮ ಜೀವ ನದಿಗಳು ಹುಟ್ಟಿ ಪ್ರವಹಿಸುತ್ತವೆ. ನಮ್ಮ ಪೂರ್ವಜರು ನದಿಗಳನ್ನು ಕೇವಲ ಪ್ರಕೃತಿ ಸಹಜವೆಂದು ಭಾವಿಸಿಲ್ಲ. ನದಿಗಳಲ್ಲಿ ಸಜೀವ ಆತ್ಮಗಳನ್ನು ಸಂದರ್ಶಿಸಿದ್ದಾರೆ.

ಉದಾಹರಣೆಗೆ ಯಮುನಾನದಿಯನ್ನು ನಮ್ಮ ಪುರಾಣಗಳು, ಸೂರ್ಯನಿಗೂ ಸಂಧ್ಯಾದೇವಿಗೂ ಜನ್ಮಿಸಿದ ಕುಮಾರಿಯಾಗಿ ಹೇಳುತ್ತವೆ. ಯಮನು ಅವಳ ಸಹೋದರನೆನ್ನುವುದರಿಂದ ಅವಳಿಗೂ ಅದೇ ಹೆಸರು ಬಂದಿತು, ಭೂತಲದ ಮೇಲೆ ಸೃಷ್ಟಿಯಲ್ಲಿ ಭಾಗ ಹಂಚಿಕೊಳ್ಳಬೇಕೆಂಬ ಉತ್ಸಾಹದಲ್ಲಿ ಅವಳು ಕರಗಿ ನದೀ ರೂಪವನ್ನು ತಾಳಿದಳಂತೆ !





ಕಾಳಿಂದ ಪರ್ವತದ ಪದತಲದಲ್ಲಿ ಹಿಮಾಲಯಗಳ ಮೇಲೆ ಯಮುನೋತ್ರಿಯ ಬಳಿಯಲ್ಲಿ ಯಮುನೆ ನಮಗೆ ದರ್ಶನ ಕೊಡುತ್ತಾಳೆ. ಸಮುದ್ರಮಟ್ಟಕ್ಕೆ ಹತ್ತು ಸಾವಿರದ ಎಂಟು ನೂರು ಅಡಿ ಎತ್ತರದಲ್ಲಿರುವ ಯಮುನೋತ್ರಿ ಅದ್ಭುತವಾದ ಪ್ರದೇಶವಾಗಿದೆ. ಆ ಪವಿತ್ರವಾದ ಪ್ರದೇಶದಲ್ಲಿ ಯಮುನಾದೇವಿಯ ಆಲಯವೂ ಇದೆ.




ಪ್ರಾರಂಭದಲ್ಲಿ ಯಮುನೆಯ ಪ್ರವಾಹವು ಸುಳಿ ಗುಂಡಿಗಳಿಂದ ಮಹಾ ಅದ್ಭುತವಾಗಿರುತ್ತದೆ. ಅದನ್ನು ಸಮೀಪಿಸಲು ಯಾವ ಪ್ರಾಣಿಗೂ ಸಾಹಸಬಾರದು. ಜಲಪಾತಧ್ವನಿ ಸಾವಿರ ಸಿಂಹಗಳ ಗರ್ಜನೆಯ ಹಾಗೆ ಭಯವನ್ನು ಹುಟ್ಟಿಸುವಂತಹುದು. ಜಲಪಾತದಿಂದ ಏಳುವ ನೀರಿನ ತುಂತುರುಗಳು ಹೊಗೆಗಳ ಮೋಡಗಳಾಗಿ ನೋಡುವವರಿಗೆ ಅತ್ಯಾಶ್ಚರ್ಯವನ್ನುಂಟು ಮಾಡುತ್ತದೆ.

ಒಂದು ದಿನ ಕೃಷ್ಣನ ಸಹೋದರನಾದ ಬಲರಾಮನು ಬೆಟ್ಟಗಳ ಮೇಲೆ ತಿರುಗುತ್ತ, ಯಮುನಾ ನದಿಯ ಜಲಪಾತವನ್ನು ನೋಡಿ, ಅದರಲ್ಲಿ ಸ್ನಾನಮಾಡಬೇಕೆಂದುಕೊಂಡನು. ಜಲಪಾತದ ಬಳಿಯಲ್ಲಿದ್ದ ದೊಡ್ಡದೊಂದು ಬಂಡೆಯ ಮೇಲೆ ನಿಂತು ನದಿಯನ್ನು ತನ್ನ ಹತ್ತಿರ ಬರುವಂತೆ ಕರೆದನು.





ಬಲರಾಮನ ಕರೆಯನ್ನು ಯಮುನೆ ಸ್ವಲ್ಪವೂ ಲಕ್ಷಿಸಲಿಲ್ಲ. ಅವನು ಮತ್ತೆ ಮತ್ತೆ ಬರುವಂತೆ ಆಜ್ಞೆ ಮಾಡಿದನು. ಆದರೂ ಪ್ರಯೋಜನವಿಲ್ಲದೆ ಹೋಯಿತು. ಕೂಡಲೇ ಅವನು ಜಲಪ್ರವಾಹಕ್ಕೆ ಹಾರಿದನು. ಪ್ರವಾಹವು ಅವನನ್ನು ದೂರಕ್ಕೆ ತಳ್ಳಿ ಹಾಕಲು ನೋಡಿತು. ಬಲರಾಮನಿಗೆ ದೊಡ್ಡ ಸಿಟ್ಟು ಬಂದಿತು.

ಅವನು ದಡದ ಮೇಲೆ ಬಂದು ತನ್ನ ನೇಗಿಲನ್ನು ಯಮುನಾ ನದಿಯಲ್ಲಿ ಚುಚ್ಚಿ, ಗುಡ್ಡಗಳ ನಡುವೆ, ಕಣಿವೆಗಳ ಎಡೆಯಿಂದ, ಮೈದಾನಗಳ ಮೇಲೆ, ಹೀಗೆ ತನ್ನ ಇಷ್ಟ ಬಂದ ಹಾಗೆ ವಾರೆಕೋರೆಯಾಗಿ ಎಳೆದುಕೊಂಡು ಹೋದನು. ಯಮುನೆ ಅವನ ನೇಗಿಲಿನ ಓಳಿ ಹಿಡಿದು ಸಾಗದೆ ಗತ್ಯಂತರವಿಲ್ಲದಾಯಿತು.





ಕಡೆಗೆ ಯಮುನೆಯ ಆತ್ಮ ಸ್ತ್ರೀ ರೂಪವನ್ನು ಧರಿಸಿ ಇಷ್ಟಕ್ಕೆ ತನ್ನನ್ನು ಬಿಡುವಂತೆ ಉಗ್ರನಾದ ಬಲರಾಮನನ್ನು ಪ್ರಾರ್ಥಿಸಿದಳು. ಬಲರಾಮನು ಶಾಂತನಾಗಿ, ಯಮುನೆಯನ್ನು ಅಷ್ಟಕ್ಕೆ ಬಿಟ್ಟು ಬಿಟ್ಟನು. ಈ ಅನುಭವದಿಂದ ಯಮುನೆ ಸ್ವಲ್ಪ ನಿಧಾನವಾಗಿ ಪ್ರವಹಿಸಲು ತೊಡಗಿದಳು.

ಪುರಾಣದ ನಗರಗಳಾದ ಹಸ್ತಿನಾಪುರ, ಇಂದ್ರ ಪ್ರಸ್ಥಗಳ ಮೂಲಕ ಯಮುನಾನದಿ ಪ್ರವಹಿಸ ತೊಡಗಿತು. ಕಾಲಗತಿಯಲ್ಲಿ ಕಣ್ಮರೆಯಾದ ಆ ಎರಡು ನಗರಗಳ ಪರಿಸರಗಳಲ್ಲಿಯೇ ಈ ದಿನಗಳ ಹೊಸದಿಲ್ಲಿ ಏರ್ಪಟ್ಟಿದೆ. ಚಾರಿತ್ರಿಕವಾಗಿ ಪ್ರಸಿದ್ಧಿ ಪಡೆದ ಕೆಂಪುಕೋಟೆಯ ಸಮೀಪ ದಲ್ಲಿಯೇ ಯಮುನಾ ನದಿ ಪ್ರವಹಿಸುತ್ತದೆ.





ಪುರಾತನ ನಗರವಾದ ಮಥುರೆಯನ್ನು ತಾಗಿಕೊಂಡೂ ಯಮುನಾನದಿ ಪ್ರವಹಿಸುತ್ತದೆ. ಮಥುರಾನಗರದ ರಾಕ್ಷಸರಾಜನಾದ ಕಂಸನ ಸೆರೆ ಮನೆಯಲ್ಲಿಯೇ ಶ್ರೀಕೃಷ್ಣನು ಜನ್ಮಿಸಿದನು. ಶಿಶುವಾಗಿದ್ದ ಕೃಷ್ಣನನ್ನು ಅವನ ತಂದೆ ವಸುದೇವನು ಮಥುರೆಯಿಂದ ಗೋಕುಲಕ್ಕೆ ಯಮುನಾ ನದಿಯನ್ನು ದಾಟಿ ಒಯ್ಯುವಾಗ, ಸರ್ಪರಾಜ ವಾಸುಕಿ ಹೆಡೆ ಬಿಚ್ಚಿ ಅವರು ಮಳೆಗೆ ನೆನೆಯದಂತೆ ಕೊಡೆ ಹಿಡಿದನು.

ಯಮುನಾ ತೀರದ ಬೃಂದಾವನದಲ್ಲಿಯೇ ಕೃಷ್ಣನು ತನ್ನ ವೇಣುಗಾನದಿಂದ ಪಶುಪಕ್ಷ್ಯಾದಿಗಳನ್ನೂ, ಭಕ್ತರನ್ನೂ ಪರವಶಗೊಳಿಸಿದನು. ಕೃಷ್ಣನ ಬಾಲಕ್ರೀಡೆಗಳ ಅತ್ಯಂತ ಸಂಬಂಧವಿದ್ದ ನದಿ ಯಮುನೆ.





ಗಂಗಾ ಯಮುನೆಗಳ ಸಂಗಮ ಸ್ಥಳವಾದ ಪವಿತ್ರ ಪ್ರಯಾಗದ ಬಳಿಯಲ್ಲಿಯೇ ಅಂತರ್ವಾಹಿನಿಯಾಗಿ ಪ್ರವಹಿಸುವ ಸರಸ್ವತೀ ನದಿ ಕೂಡಾ ಗಂಗಾನದಿಯೊಂದಿಗೆ ಕೂಡುತ್ತದೆ. ಹೀಗೆ ತ್ರಿವೇಣೀ ಸಂಗಮವೆನಿಸಿದ ಪ್ರಯಾಗದಲ್ಲಿ ಸ್ನಾನ ಮಾಡುವುದು ಶುಭಪ್ರದವೆಂದು ಭಕ್ತರು ಭಾವಿಸುವರು.

# ಕಣ್ಣು ತೆರೆಯಿತು

**ಮಾ**ರ್ತಾಂಡನೆಂಬೊಬ್ಬ ರಾಜನ ಹತ್ತಿರ ಸುಬುದ್ಧಿ ಎಂಬೊಬ್ಬ ಮಂತ್ರಿ ಇದ್ದನು. ರಾಜನ ಅರಮನೆಯಲ್ಲಿ ಅನೇಕ ಮಂದಿ ಜೀತದಾಳುಗಳಿದ್ದರು. ರಾಜನು ಅವರನ್ನು ಮನುಷ್ಯರಂತೆ ನೋಡದೆ, ಅವರಿಂದ ಪಶುಗಳ ಹಾಗೆ ಕೆಲಸ ಮಾಡಿಸಿಕೊಳ್ಳುತ್ತಿದ್ದನು.

ಒಂದು ದಿನ ಮಂತ್ರಿ ಸುಬುದ್ಧಿ ರಾಜನೊಂದಿಗೆ, "ಮಹಾಪ್ರಭೂ, ಈ ಜೀತದಾಳುಗಳು ಕೂಡಾ ಉಳಿದವರಂತೆಯೇ ಮನುಷ್ಯರಾದುದರಿಂದ, ಅವರನ್ನು ಉಳಿದ ಮನುಷ್ಯರ ಹಾಗೆ ಸ್ವಲ್ಪ ಚೆನ್ನಾಗಿ ಬದುಕಲು ಬಿಡಬೇಕು" ಎಂದು ಬಿನ್ನವಿಸಿಕೊಂಡನು.

ಅದಕ್ಕೆ ರಾಜನು, "ಅದೇಕೆ? ಅವರ ಸ್ಥಿತಿಯೇ ಅಂಥಾದ್ದು. ರಾಜನ ವಾರಸರು ರಾಜರು ಆಗುತ್ತಾರೆ. ಹಾಗೆಯೇ ಜೀತಗಾರರ ವಾರಸರು ಜೀತಗಾರರೇ ಆಗುತ್ತಾರೆ" ಎಂದನು.

ಕೆಲವು ದಿನಗಳ ಮೇಲೆ ಪೂರ್ವಿಕರನ್ನು ಜ್ಞಾಪಿಸಿಕೊಳ್ಳುವ ದಿನವು ಬಂದಿತು. ಮಂತ್ರಿ ರಾಜನ ಬಳಿಗೆ ಹೋಗಿ, "ಪ್ರಭೂ! ಈ ದಿನ ನಮ್ಮ ಪೂರ್ವಿಕರನ್ನು ನೆನಪಿಸಿಕೊಳ್ಳಬೇಕಾದ ದಿನ. ತಾವು ಸ್ಮಶಾನಕ್ಕೆ ದಯಮಾಡಬೇಕು" ಎಂದನು.

ಇಬ್ಬರೂ ಸ್ಮಶಾನಕ್ಕೆ ಹೊರಟರು.

ಎರಡು ದಿನಗಳ ಹಿಂದೆ ಸುರಿದ ಮಳೆಯಿಂದಾಗಿ, ಸ್ಮಶಾನದಲ್ಲಿ ಸುಟ್ಟ ಶವಗಳ ಎಲುಬುಗಳು ಒಂದರೊಡನೊಂದು ಕಲೆತು ಹೋಗಿದ್ದುವು. ಮಂತ್ರಿ ಸುತ್ತಮುತ್ತಲೂ ಹರಡಿದ್ದ ಎಲುವುಗಳನ್ನೆಲ್ಲಾ ಆರಿಸಿ ಒಟ್ಟುಗೂಡಿಸಿ, ರಾಜನೊಂದಿಗೆ "ಪ್ರಭೂ! ಇವುಗಳಲ್ಲಿ ನಿಮ್ಮ ಪೂರ್ವಿಕರ ಎಲುಬುಗಳು ಯಾವುವೆಂದು ನೋಡಿ ಹೇಳಿರಿ. ಇವುಗಳಲ್ಲಿ ಕೆಲವು ಜೀತದಾಳುಗಳದೂ ಇವೆ. ನನಗೆ ಗೊತ್ತಾಗುವುದಿಲ್ಲ. ತಾವು ಸ್ವಲ್ಪ ಗುರುತು ಹೇಳಿದರೆ ಉಳಿದ ಕಾರ್ಯಗಳನ್ನು ನೆರವೇರಿಸುತ್ತೇನೆ" ಎಂದನು.

ಆ ಮಾತು ಕೇಳಿ ರಾಜನಿಗೆ ಕಣ್ಣು ತೆರೆದಂತಾಯಿತು, ಅವನು ಆ ದಿನವೇ ಜೀತದಾಳುಗಳಿಗೆ ಕೆಲಸಗಳ ಮಿತಿಯನ್ನು ಏರ್ಪಡಿಸಿ, ಉಳಿದ ಮನುಷ್ಯರ ಹಾಗೆ ಸ್ವತಂತ್ರವಾಗಿರಲು ಅನುವು ಮಾಡಿದನು.





# ಗಡ್ಡದ ವ್ಯಾಪಾರ

ಒಂದು ದಿನ ಆ ಇಬ್ಬರು ಸ್ನೇಹಿತರೂ ಲೋಕಾಭಿರಾಮವಾಗಿ ಮಾತಾಡಿಕೊಂಡಿರುವಾಗ, ಹೇಗೋ ಕೂದಲಿನ ಮಾತು ಬಂತು. ಮೊದಲನೇಯವನು, "ಮಿತ್ರಾ, ಇಷ್ಟು ದಿನ ನಿನ್ನ ಮುಖ ನೋಡ್ತಾ ಇದ್ದೇನಷ್ಟೆ? ನಿನ್ನ ಇದಿರು ಹೇಳಲಿಲ್ಲ, ದೃಷ್ಟಿ ಬೀಳುವ ಹಾಗೆ ಹೇಳಬಾರದು ನೋಡು. ನಿಜಕ್ಕೂ ನಿನ್ನ ಗಡ್ಡದ ಕೂದಲು ನೋಡುವಾಗ ನನಗೆ ಬಹಳ ಸಂತೋಷವಾಗುತ್ತದೆ. ನಾನು ಎಷ್ಟೋ ಜನರ ಗಡ್ಡವನ್ನು ನೋಡಿದ್ದೇನಾದರೂ ನಿನ್ನ ಗಡ್ಡದಷ್ಟು ಶೋಭಿಸುವ ಮುಖ ನಮ್ಮ ದೇಶದಲ್ಲೇ ಇಲ್ಲಾ ಅಂದರೆ ನಂಬು. ಸುಮ್ಮನೆ ಮುಖಸ್ತುತಿ ಮಾಡುವೆನೆಂದುಕೊಳ್ಳಬೇಡ" ಎಂದನು.

ಅದನ್ನು ಕೇಳಿ ಎರಡನೆಯವನು ಉಬ್ಬಿಕೊಳ್ಳುತ್ತ, "ಹೌದು ಮಿತ್ರಾ, ಎಲ್ಲರೂ ಹಾಗೆಯೇ ಹೇಳುತ್ತಾರೆ. ನನಗೂ ಆಶ್ಚರ್ಯವಾಗುತ್ತದೆ. ಎಷ್ಟೋ ಜನರು ನನ್ನ ಈ ಗಡ್ಡದ ಮೇಲೆ ಕಣ್ಣು ಕೂಡಾ ಹಾಕಿದ್ದಾರೆ. ಏನೋ ಬೆಲೆ ಕೊಟ್ಟು ಕೊಂಡುಕೊಳ್ಳಲಿಕ್ಕೂ ಸಿದ್ಧರಾದವರೂ ಇದ್ದಾರೆ ಗೊತ್ತಾ? ನಾನು ಯಾರಿಗೂ ಸರಿಯಾದ ಉತ್ತರ ಕೊಡಲಿಲ್ಲ" ಎಂದು ತನ್ನ ಗಡ್ಡದ ಕೂದಲಿನೆಡೆಗೆ ಬಲಗೈಯ ಐದು ಬೆರಳುಗಳನ್ನು ತೂರಿಸಿ ಉತ್ಸಾಹದಿಂದ ಬಾಚಿಕೊಂಡನು, ಏನೋ ಯೋಚಿಸುವಂತೆ ಗೋಣಾಡಿಸುತ್ತ.

ಅದನ್ನು ಕೇಳಿ ಮೊದಲನೆಯವನು ಆತುರದಿಂದ "ಯಾರಿಗೂ ಮಾತು ಕೊಡಲಿಲ್ಲವಷ್ಟೆ? ಮಾರುವುದಾದರೆ ಹೇಳು. ನಾನೇ ಕೊಂಡುಕೊಳ್ಳುತ್ತೇನೆ. ಒಂದು ಬೆಲೆ ಹೇಳು, ಎಷ್ಟು ಬೆಲೆಯಾಗುತ್ತೆ? ನೋಡುವಾ" ಎಂದನು.

ಆಸೆಯುವನಾದ ಎರಡನೆಯವನಿಗೆ, ಅದಕ್ಕೆ ತಕ್ಕ ಊಹೆಯೊಂದು ಒಮ್ಮೆಗೇ ಎದ್ದುಕೊಂಡಿತು. ಎತ್ತಿದ ಬಾಯಿಗೇ, "ಹಾಗಾದರೆ ನಿನಗೆ ಹೆಚ್ಚಿಗೆ ಹೇಳಲಾರೆ, ಒಂದು ಸಾವಿರ ಮೊಹರೀ ಕೊಟ್ಟರೆ ಸಾಕು" ಎಂದನು.

"ಸರಿ. ಒಪ್ಪುತ್ತೇನೆ. ಮಿತ್ರನೊಂದಿಗೆ ಚರ್ಚೆ ಮಾಡುತ್ತೇನೆಯೆ?" ಎಂದು ಮೊದಲನೆಯವನು ಜೇಬಿನಲ್ಲಿದ್ದ ಹಣವನ್ನೆಲ್ಲಾ ತೆಗೆದು ಎಣಿಸಿ. "ಈಗ ಮುಂಗಡವಾಗಿ ಇದನ್ನು ತೆಗೆದುಕೊ" ಎಂದು ಅವನ ಮುಂದಿಟ್ಟನು. ಐನೂರು ಮೊಹರಿಗಳು ಇದ್ದುವು.

ದಶಕಗಳಾಚೆಗಿನ ಚಂದಮಾಮ ಕಥೆ



"ಆದರೆ ಒಂದೇ ಒಂದು ಷರತ್ತು ಮಿತ್ರಾ. ಈ ಕ್ಷಣದಿಂದ ನಿನ್ನ ಗಡ್ಡವು ನನ್ನದಾಗಿದೆ. ಉಳಿದ ಪೂರ್ತಿ ಹಣವನ್ನೂ ತಂದುಕೊಟ್ಟು ನಿನ್ನ ಗಡ್ಡವನ್ನು ನಾನು ತೆಗೆದುಕೊಂಡು ಹೋಗುವವರೆಗೆ ಅದನ್ನು ನೀನು ಜಾಗರೂಕತೆಯಿಂದ ಕಾಪಾಡಬೇಕು. ಈ ಗಡ್ಡ ನಿನ್ನ ಹೊಕ್ಕುಳನ್ನು ದಾಟುವವರೆಗೆ ನಿನ್ನ ಹತ್ತಿರವೇ ಬೆಳೆಯಲಿ. ಎಂದಿನಂತೆ ತೈಲ ಸವರಿಕೊಂಡು ಬಾ. ಆ ಖರ್ಚು ನನ್ನ ಲೆಕ್ಕಕ್ಕೇ ಬರೆದಿಡು. ಹೇಗೂ ಮಾರುವಂಥಾದ್ದಾಯಿತೆಂದು ಉದಾಸೀನ ಮಾಡಬೇಡ. ತಿಳಿಯಿತಷ್ಟೆ ?" ಎಂದನು.

"ಅದಕ್ಕೇನು ಬಿಡಯ್ಯ" ಎಂದು ಹೇಳಿ ಎರಡನೆಯವನು ಅವನು ಹೇಳಿದಂತೆ ಮಾಡಲು ಒಪ್ಪಿಕೊಂಡನು. ಅಷ್ಟಕ್ಕೆ ಸುಮ್ಮನಾಗದೆ ಈ ವ್ಯಾಪಾರವು ರುಜುವಾಗುವಂತೆ ಒಪ್ಪಂದದ ಪತ್ರ ಬರೆಸಿಕೊಂಡದ್ದೂ ಆಯಿತು.

ಮೊದಲನೆಯವನು ಎರಡನೆಯವನೊಂದಿಗೆ ಪುನಃ, "ಇನ್ನೊಂದು ಮಾತು ಮಿತ್ರಾ, ಇನ್ನು ಮೇಲೆ ಆ ಗಡ್ಡವನ್ನು ನೋಡಿ ಯಾರಾದರೂ ಆಹಾ ಚೆನ್ನಾಗಿದೆ ಎಂದು ಮೆಚ್ಚಿ ಮಾತಾಡಿದರೆ, ನೀನು ಅವರೊಂದಿಗೆ, ಈ ಗಡ್ಡ ನಿನ್ನದಲ್ಲವೆಂದು, ಇಂಥವನದೆಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಡು. ಇದನ್ನು ಕೊಂಡುಕೊಂಡವರಿಗಾಗಿಯೇ ಪೋಷಿಸಿಕೊಡಿರುವುದಾಗಿ ಸತ್ಯವನ್ನೇ ಹೇಳು. ನಿನಗೆ ಇನ್ನೊಬ್ಬರಿಂದಾಗುವ ತೊಂದರೆ ತಪ್ಪಿಸಲಿಕ್ಕೇ ಹೀಗೆ ಹೇಳುತ್ತೇನೆ. ಪರವಾಗಿಲ್ಲ" ಎಂದನು.

ಮರುದಿನದಿಂದ ಹೊತ್ತಲ್ಲದ ಹೊತ್ತಿನಲ್ಲಿ ಮೊದಲನೆಯವನು ಎರಡನೆಯವನ ಬಳಿಗೆ ಬರಲು ಪ್ರಾರಂಭಿಸಿದನು.

"ಏನು ಮಿತ್ರಾ, ಹೀಗೆ ಬಂದೆಯಲ್ಲಾ ?" ಎಂದು ಕೇಳಿದರೆ "ಮತ್ತೇನಿಲ್ಲ. ನನ್ನ ಗಡ್ಡ ಹೇಗಿದೆಯೋ ನೋಡಿ ಹೋಗೋಣವೆಂದು ಬಂದೆ, ಅಷ್ಟೇ" ಎನ್ನುವನು ಮೊದಲನೇಯವನು.

ಮತ್ತೊಂದು ದಿನ ಹಾಗೆ ಬಂದ ಮೊದಲನೇಯವನು, ಎರಡನೆಯವನ ಗಡ್ಡವನ್ನು ತಡವಿ ನೋಡಿ, "ಇದೇನಯ್ಯ, ಇಷ್ಟು ಸಿಕ್ಕಾಗಿದೆಯಲ್ಲಾ ! ಜಗಜಗನೆ ಹೊಳೆಯಬೇಕಾಗಿರುವ ನನ್ನ ಗಡ್ಡದ ಕೂದಲು ಹೀಗೆ ಒಣಕಲಾಗಿದೆ ! ಮೊದಲು ನಿನ್ನದಾಗಿದ್ದಾಗ ಎಷ್ಟು ಚೆನ್ನಾಗಿ ಪೋಷಿಸುತ್ತ ಇಟ್ಟುಕೊಳ್ಳುತ್ತಿದ್ದೀ ! ಈಗ ಅನ್ಯನದೆಂದಾದ ಕೂಡಲೇ ಅಲಕ್ಷ್ಯ ಮಾಡಬಹುದೇ ? ಇದರ ಪೋಷಣೆಗೆ ಬೇಕಾದ ಖರ್ಚು ನಾನು ಕೊಡುತ್ತೇನೆಂದರೂ, ಹೀಗೆ ಮಾಡುವುದುಂಟೆ ? ಸ್ವಲ್ಪವಾದರೂ ನ್ಯಾಯ ನೀತಿ ನೋಡಬೇಡವೇನು ? ನಾಗರೀಕತೆ ಬೇಡೇನು ?" ಎಂದನು ಕೋಪದಿಂದ.

ಹೀಗೆ ಆಗಾಗ ಬಂದು ಅವನು ಮಿತ್ರನ ಮುಖಕ್ಕೆ ಕೈಹಾಕಿ ಅವಮಾನಕರವಾದ ಮಾತುಗಳನ್ನು ಹೇಳಲು,

ಎರಡನೆಯುವವನಿಗೆ ಸಿಟ್ಟು ಬಂದಿತು. "ಮಿತ್ರನಾಗಿದ್ದು ಹೀಗೆಲ್ಲಾ ಹೇಳುವುದುಂಟೆ? ಉಳಿದ ಹಣ ತಂದು ಕೊಟ್ಟು, ನಿನ್ನ ಗಡ್ಡ ಒಯ್ಯುವುದನ್ನು ಬಿಟ್ಟು ಹೀಗೆಲ್ಲಾ ಅನವಶ್ಯಕ ಮಾತು ಬೇಡ!" ಎಂದು ಜರೆದಾಡಿದನು.

ಕಡೆಗೆ "ನನ್ನ ಗಡ್ಡ ನನ್ನ ಮುಖದಲ್ಲೇ ಇರಲಿ. ಮಾರುವೆನೆಂದದ್ದೇ ತಪ್ಪಾಯಿತು. ನೀನು ಕೊಟ್ಟ ಮುಂಗಡ ಹಣ ಐನೂರು ಮೊಹರಿ ಇಂದೇ ಕೊಟ್ಟು ಬಿಡುತ್ತೇನೆ" ಎಂದನು.

"ಇದು ನಿನ್ನ ಹೊಕ್ಕಳು ದಾಟುವವರೆಗೆ ಹಾಗೆ ಮಾಡಲು ಸಾಧ್ಯವಿಲ್ಲ. ಅದು ಹೇಳಿದ ಕರಾರು ಮಾತನ್ನು ತಪ್ಪಿದಂತೆ" ಎಂದನು ಮೊದಲನೆಯುವನು ಖಂಡಿತ ಸ್ವರದಲ್ಲಿ.

ದಿನಾ ಮೊದಲನೆಯುವನು ಬಂದು ತನ್ನ ಗಡ್ಡದ ಕೂದಲನ್ನು ಎಳೆದು ಎಳೆದು ಪೀಡಿಸುವುದನ್ನು ನೋಡಿ, ಎರಡನೆಯುವನಿಗೆ ಏನು ಮಾಡುವುದೆಂದು ತೋರಲಿಲ್ಲ. ಒಂದು ಸಾವಿರ ವರಹ ಕೊಡುವೆನೆಂದೂ ತನ್ನ ಗಡ್ಡದ ತಂಟೆಗೆ ಬರಬೇಡವೆಂದೂ ಹೇಳಿದನು.

ಆದರೂ ಮೊದಲನೆಯುವನು ಒಪ್ಪಲಿಲ್ಲ. ಕೆಲವು ದಿನ ಹೋದರೆ ಇನ್ನೂ ಹೆಚ್ಚು ಬರಮಾಡಿಕೊಳ್ಳುವ ಆಶೆ.

ಒಂದು ದಿನ ಬೆಳಗ್ಗೆ ಮೊದಲನೆಯುವನು ತಾನು ಕೊಂಡುಕೊಂಡ ಗಡ್ಡ ಹೇಗಿದೆಯೋ ನೋಡಲು ಬಂದನು. ಆಗ ಎರಡನೆಯುವನು ಗಾಢ ನಿದ್ದೆಯಲ್ಲಿದ್ದನು. ಮೊದಲನೆಯುವನು ನಿರ್ದಾಕ್ಷಿಣ್ಯವಾಗಿ ಅವನ ಗಡ್ಡವನ್ನು ಹಿಡಿದು ಎಳೆದದ್ದೇ ತಡ, ಇಡೀ ಗಡ್ಡ ಪೂರ್ತಿ ಅವನ ಕೈಗೇ ಬಂದುಬಿಟ್ಟಿತು,

ಎರಡನೆಯುವನು ತಟಕ್ಕನೆ ಎದ್ದು, "ಹಾ!" ಎಂದು ಕೂಗಿದನು. ಅವನು ತನ್ನನ್ನು ಮೋಸ ಪಡಿಸಿದನೆಂದು ಮೊದಲನೆಯುವನು, ವ್ಯಾಪಾರದ ಒಪ್ಪಂದ ಪತ್ರದ ಆಧಾರದಲ್ಲಿ ಎರಡನೆಯುವನ ಮೇಲೆ ಫಿರ್ಯಾದಿ ಮಾಡಿದನು.

ನ್ಯಾಯಾಧಿಪತಿ ಇಬ್ಬರನ್ನೂ ವಿಚಾರಿಸಿ, "ಹಣದ ಆಶೆಯ ಎರಡನೆಯುವನು, ತಮಾಷೆಯಾಗಿ ಸಿಕ್ಕಿದ್ದು ಲಾಭವೆಂದುಕೊಂಡರೆ, ಮೊದಲನೆಯುವನು ಅವನಿಗಿಂತ ಹೆಚ್ಚಿನ ಆಶೆಯಿಂದ ಪೀಡಿಸಿದ್ದಾನೆ. ಆ ಪೀಡೆಯನ್ನು ತಾಳದೆ ಎರಡನೆಯುವನು ಕೃತ್ರಿಮ ಗಡ್ಡ ಧರಿಸಿಕೊಳ್ಳುವಂತೆ ಮಾಡಿದ್ದಾನೆ. ಆದ್ದರಿಂದ ಎರಡನೆಯುವನ ಕೃತ್ರಿಮ ಗಡ್ಡವೇ ಮುಂಗಡದ ಬೆಲೆಗೆ ಸರಿಯಾಯಿತೆಂದುಕೊಂಡು ಅದನ್ನೇ ಒಯ್ಯತಕ್ಕದ್ದು. ಬೇರೆ ಏನೂ ಕೊಡಬೇಕಾಗಿಲ್ಲವೆಂಬುದೇ ಅವನ ಅತ್ಯಾಶೆಗೆ ಸರಿಯಾದ ಶಿಕ್ಷೆಯಾಯಿತು" ಎಂದು ತೀರ್ಪು ಹೇಳಿದನು.





# ಕೋಪದ ಗಂಡ

ಹಿಂದೆ ಒಂದಾನೊಂದು ಗ್ರಾಮದಲ್ಲಿ ಬಲಭದ್ರನೆಂಬೊಬ್ಬ ರೈತನಿದ್ದನು. ಅವನು ಉದಾಸೀನವೇನಿಲ್ಲದ ಚುರುಕು ಮನುಷ್ಯನಾಗಿದ್ದು ಕಷ್ಟಪಟ್ಟು ಕೆಲಸ ಮಾಡುವನು. ಆದರೆ ಅವನಿಗೆ ಕೋಪವು ಬಹಳ ಜಾಸ್ತಿ. ಕೋಪ ಬಂದಾಗ ಅವನ ಆಲೋಚನೆ ಕುಂದಿ ಹೋಗುತ್ತದೆ. ಅವನ ಹೆಂಡತಿಯಾದ ಶಾಂತೆಗೆ ಹೆಸರಿಗೆ ತಕ್ಕಂತೆ ಸಹನೆ ಹೆಚ್ಚು. ಗಂಡನ ಕೋಪತಾಪಗಳನ್ನು ಶಾಂತತೆಯಿಂದಲೇ ಸಹಿಸಿಕೊಂಡಿರುವಳು.

ಎಂತಹ ಸಹನೆಗಾದರೂ ಒಂದು ಎಲ್ಲೆ ಇದ್ದೇ ಇರುತ್ತದೆ. ಒಂದು ದಿನ ಅವಳು ಗಂಡನ ಕೋಪವನ್ನು ಸಹಿಸಲಾಗದೆ ಇದಿರು ತಿರುಗಿ, "ಸುಮ್ಮ ಸುಮ್ಮನೆ ಏಕೆ ಹೀಗೆ ನನ್ನ ಬಯ್ತೀರಿ? ನಿಮಗೆ ನಾನೇನು ಕಡಿಮೆ ಮಾಡಿದ್ದೇನೆ? ಅಷ್ಟು ಒದ್ದಾಡಿಯೂ ಇಷ್ಟವಿಲ್ಲದೇ ಹೋದರೆ ನನ್ನನ್ನು ಮನೆ ಬಿಟ್ಟು ಹೋಗಿಬಿಡು ಅನ್ನಿ, ಇಲ್ಲಿ ಮಾಡುವ ಚಾಕರೀನ ಎಲ್ಲಿ ಮಾಡಿದರೂ ನನ್ನ ಬದುಕು ಹಾಯಾಗಿ ಕಳೆದೀತು! ಸಾಕಾಯಿತು ನಿಮ್ಮ ಹತ್ತಿರ!" ಎಂದಳು.

ಹೆಂಡತಿಯ ಮಾತಿನಿಂದ ಬಲಭದ್ರನ ಕೋಪವು ಇನ್ನಷ್ಟು ಹೆಚ್ಚಾಯಿತು. "ಹಾಗಾದರೆ ಈ ಕ್ಷಣವೇ ಈ ಮನೆ ಬಿಟ್ಟು ಹೋಗಿಬಿಡು. ಹಾಯಾಗಿ ಬದುಕು! ನಡೆ!" ಎಂದನು.

ಗಂಡ ಹಾಗೆ ಹೇಳಿಬಿಟ್ಟುದರಿಂದ ಶಾಂತೆ ಒಮ್ಮೆಗೇ ಕಣ್ಣೀರು ತುಂಬಿಕೊಂಡು, ಉಟ್ಟ ಬಟ್ಟೆಯೊಂದಿಗೆ ಆಗಿಂದಾಗಲೇ ಮನೆ ಬಿಟ್ಟು ಹೊರಟುಹೋದಳು.

ಆ ದಿನವಿಡೀ ಬಲಭದ್ರನು ಕೋಪದಿಂದಲೇ ಇದ್ದನು. ಮರುದಿನ ಅವನ ಕೋಪವು ಸ್ವಲ್ಪ ತಗ್ಗಿತು. ಹೆಂಡತಿ ನಿಜಕ್ಕೂ ಹೋಗಿ ಬಿಡುವಳೆಂದು ಅವನು ಅಂದುಕೊಂಡಿರಲಿಲ್ಲ. ಬಹುಶಃ ಊರೊಳಗೇ ಯಾರ ಮನೆಯಲ್ಲಿಯೋ ಇದ್ದು ಹಿಂದಿರುಗಿ ಬರುವಳೆಂದು ಕಾಯತೊಡಗಿದನು. ಹಾಗೇನೂ ನಡೆಯದಿರಲು ಅವನಿಗೆ ಗಾಬರಿಯಾಗತೊಡಗಿತು.

ಶಾಂತೆಗೆ ಚಿಕ್ಕ ಪ್ರಾಯದಲ್ಲೇ ತಂದೆತಾಯಿಗಳು ತೀರಿಹೋಗಿದ್ದರು, ಅವಳ ಸೋದರಮಾವನ ಮನೆಯಲ್ಲೇ ಬೆಳೆದು ದೊಡ್ಡವಳಾಗಿದ್ದಳು. ಅವರು ಅವಳನ್ನು ಚೆನ್ನಾಗಿ ಮೈತೇಯಿಸಿ, ಚಾಕರಿ ಮಾಡಿಸಿಕೊಂಡವರು. ಮದುವೆಯಾದ ಮೇಲೆ ಅವರು

ಜಿ. ಆರ್. ಲಕ್ಷ್ಮಿ



ಶಾಂತೆಯ ಮನೆಗೆ ಬರುವುದಾಗಲೀ, ಶಾಂತೆ ಅಲ್ಲಿಗೆ
ಹೋಗುವುದಾಗಲೀ ನಡೆದಿರಲಿಲ್ಲ.

ಶಾಂತೆ ಅದರ ಮರುದಿನ ಕೂಡಾ ಮನೆಗೆ
ಬಾರದಿರುವುದನ್ನು ನೋಡಿ ಬಲಭದ್ರನು ಅವಳನ್ನು
ಹುಡುಕಲಿಕ್ಕಾಗಿ ಹೊರಟನು. ಮೊದಲು ಊರೊಳ
ಗೆಲ್ಲಾ ಹುಡುಕಾಡಿದನು. ಊರೊಳಗೆ ಯಾರ
ಮನೆಯಲ್ಲಿಯೂ ಶಾಂತೆ ಇಲ್ಲವೆಂದು ತಿಳಿದ ಮೇಲೆ,
ಅವಳ ಸೋದರಮಾವನ ಊರಿಗೇ ಹೋದನು.
ಶಾಂತೆ ಅಲ್ಲಿಗೂ ಹೋಗಿರಲಿಲ್ಲ. ಅಲ್ಲಿಯ ನೆರೆ
ಹೊರೆಗಳಲ್ಲಿಯೂ ನೋಡಿದನು. ಅವಳು ತಮ್ಮ
ಮನೆಗೆ ಬಂದರೆ ಖಂಡಿತವಾಗಿ ತಿರುಗಿ ಕಳುಹಿಸು
ತ್ತೇವೆಂದು ಸೋದರಮಾವನು ಬಲಭದ್ರನೊಂದಿಗೆ
ಹೇಳಿದನು.

ಬಲಭದ್ರನಿಗೆ ಎಷ್ಟು ಹೆಚ್ಚು ಕೋಪವಿದ್ದರೂ
ಹೆಂಡತಿಯ ಮೇಲೆ ಬಹಳ ಇಷ್ಟವಿತ್ತು. ಅವಳನ್ನು
ಕಂಡುಹಿಡಿಯದೆ ಮನೆಗೆ ಹೋಗಕೂಡದೆಂದು ಪಣ
ತೊಟ್ಟನು. ಆದರೆ ಇನ್ನೆಲ್ಲಿ ಹುಡುಕಬೇಕೆಂದು
ತಿಳಿಯಲಿಲ್ಲ. ತನ್ನ ಊರಿನಲ್ಲಿ ಮತ್ತೊಮ್ಮೆ ಎಲ್ಲರನ್ನೂ
ಕೇಳಿ ನೋಡಿದ್ದೂ ಆಯಿತು.

ಹಾಗೆ ಅವನು ಊರೊಳಗೆ ಅಡ್ಡಾಡುವಾಗ
ಅಪ್ಪಣ್ಣನೆಂಬವನು ತನ್ನ ಎತ್ತಿನ ಗಾಡಿಯಲ್ಲಿ ಬರುತ್ತ
ಬಲಭದ್ರನನ್ನು ನೋಡಿ, "ನಿಮ್ಮ ಹೆಂಡತಿ ಶಾಂತಮ್ಮ
ಮೊನ್ನೆ ನನ್ನ ಗಾಡಿಯಲ್ಲಿ ಹತ್ತಿದರು. ನಾನು
ಅವರನ್ನು ರಾಮಪುರದಲ್ಲಿ ಇಳಿಸಿದ್ದೇನೆ. ಅಲ್ಲಿಂದ
ಎಲ್ಲಿಗೆ ಹೋದರೋ ತಿಳಿಯದು" ಎಂದನು.

ರಾಮಪುರವು ಅಲ್ಲಿಗೆ ಬಹಳ ದೂರವಿತ್ತು.
ಬಲಭದ್ರನು ಆ ಕೂಡಲೇ ರಾಮಪುರದ ದಾರಿ
ಹಿಡಿದು ಬೇಗಬೇಗನೆ ಸಾಗಿದನು. ಅಲ್ಲಿಗೆ ಹೋಗಲು
ಒಳ್ಳೆಯ ದಾರಿಯೇನೋ ಇದ್ದಿತು. ಆದರೆ ಅದು
ಸುತ್ತಿ ಬಳಸಿ ಹೋಗುವ ದೂರದ ದಾರಿ. ಹತ್ತಿರದ
ದಾರಿಯಲ್ಲಿ ಹೋಗಬೇಕಾದರೆ, ಸ್ವಲ್ಪ ದೂರದವರೆಗೆ
ಅರಣ್ಯದೊಳಗಿನಿಂದಾಗಿ ನಡೆಯಬೇಕು. ಆ ದಾರಿ
ಯಲ್ಲಿ ಹೋಗಲು ಜನರು ಹೆದರುತ್ತಿದ್ದರು.

ಬೇಗನೆ ಹೆಂಡತಿಯನ್ನು ಕಂಡುಹಿಡಿಯಬೇಕೆಂಬ
ತವಕದಲ್ಲಿ ಬಲಭದ್ರನು ಆ ಹತ್ತಿರದ ದಾರಿಯಲ್ಲೇ
ತಿರುಗಿ ನಡೆದನು. ಅವನು ಸ್ವಲ್ಪದೂರ ಪ್ರಯಾಣ
ಮಾಡಲು ಕಾಡುದಾರಿ ಬಂದಿತು. ಕವಲೊಡೆದ
ದಾರಿಯಲ್ಲಿ ಅವನು ಹಿಡಿದ ಒಂದು ದಾರಿ
ತಪ್ಪಾಗಿತ್ತು. ದಾರಿತಪ್ಪಿ ಹೋಗಿ ಹೋಗಿ ಒಂದು
ಗುಡ್ಡದ ಪ್ರಾಂತವನ್ನು ಮುಟ್ಟಿದನು. ಅಲ್ಲಿ
ಆಯಾಸ ತೀರಿಸಿಕೊಳ್ಳೋಣವೆಂದು ಒಂದು ಗುಹೆಯ
ಹತ್ತಿರ ಕುಳಿತುಕೊಂಡನು.

ಆ ಬೆಟ್ಟದ ಗುಹೆ ಕೆಲವು ಕಳ್ಳರ ನಿವಾಸಸ್ಥಾನ
ವಾಗಿತ್ತು. ಬಲಭದ್ರನು ಅಲ್ಲಿ ಕುಳಿತ ಸ್ವಲ್ಪ ಹೊತ್ತಿಗೆ
ಐದು ಮಂದಿ ಕಳ್ಳರು ಅಲ್ಲಿಗೆ ಬಂದು ನಿಂತರು.
ಅವರೊಡನೆ ಸರಿದಾರಿ ಕೇಳಬಹುದೆಂದು ಬಲ
ಭದ್ರನು ಅಂದುಕೊಳ್ಳುವಷ್ಟರಲ್ಲಿ ಅವರಲ್ಲೊಬ್ಬನು

ಬಲಭದ್ರನನ್ನು ನೋಡಿ, "ನೀನು ಇಲ್ಲಿ ಬಂದು ಕುಳಿತಿರುವಿ ಏಕೆ ?" ಎಂದು ಕೇಳಿದನು.

"ರಾಮಪುರಕ್ಕೆ ಹೊರಟಿದ್ದೇನೆ. ಆಯಾಸ ತೀರಿಸಿಕೊಳ್ಳಲು ಕುಳಿತಿದ್ದೇನೆ" ಎಂದನು ಬಲಭದ್ರ.

ಕಳ್ಳರು ಅವನನ್ನು ಅನುಮಾನದಿಂದ ನೋಡುತ್ತ, "ರಾಮಪುರದ ದಾರಿ ಹೀಗೆ ಬರುವುದಿಲ್ಲವಷ್ಟೆ ?" ಎಂದರು.

"ದಾರಿ ತಪ್ಪಿದೆ ನಿಜ. ಸರಿಯಾದ ದಾರಿ ಸ್ವಲ್ಪ ಹೇಳಿಬಿಡಿ. ಆ ಕಡೆಗೆ ಹೋಗುತ್ತೇನೆ" ಎಂದನು ಬಲಭದ್ರ.

"ಕಳ್ಳರ ಜೀವ ಹುಳ್ಳಹುಳ್ಳಗೆ" ಎಂಬಂತೆ, ಕಳ್ಳರಿಗೆ ಬಲಭದ್ರನ ಮೇಲಿದ್ದ ಅನುಮಾನ ತೀರಲಿಲ್ಲ. ಅವನು ತಮ್ಮ ರಹಸ್ಯ ಕಂಡುಹಿಡಿಯಲು ಬಂದ ಯಾವನೋ ರಾಜಭಟನಾಗಿರಬೇಕೆಂದು ತೋರಿತು.

ಅವರಲ್ಲೊಬ್ಬನು ಬಲಭದ್ರನ ಹತ್ತಿರ ಬಾಗಿ ಮರ್ಯಾದೆಯಿಂದ, "ರಾಮಪುರದಲ್ಲಿ ನೀವೇನು ಕೆಲಸ ಮಾಡುವಿರಿ ?" ಎಂದು ಕೇಳಿದನು.

"ಅಲ್ಲಿ ನನ್ನ ಹೆಂಡತಿ ಇದ್ದಾಳೆ" ಎಂದನು ಬಲಭದ್ರ.

"ಹಾಗೇನು ! ರಾಮಪುರದಲ್ಲಿ ನನಗೆ ಎಲ್ಲರ ಪರಿಚಯವೂ ಇದೆ. ನಿಮ್ಮ ಮಾವಯ್ಯನ ಹೆಸರೇನೆಂದು ಹೇಳಿರಿ" ಎಂದನು ಇನ್ನೊಬ್ಬ ಕಳ್ಳ.

"ನನಗೆ ಅತ್ತೆ ಮಾವಂದಿರಿದ್ದರೆ ತಾನೇ ಹೆಸರು ಹೇಳುವುದು ? ಅದೆಲ್ಲ ನಾನೇ ನೋಡಿಕೊಳ್ಳುತ್ತೇನೆ ಬಿಡಿ" ಎಂದನು ಬಲಭದ್ರ ಹುಬ್ಬು ಸುರುಗಿಸಿ.

"ಹಾಗೆಂದರೆ ಹೇಗೆ ? ಅಲ್ಲಿ ಯಾರ ಮನೆಯಲ್ಲಿ ನಿಮ್ಮ ಮನೆಯಾಕೆ ಇರುವರೆಂದು ಹೇಳಿರಿ" ಎಂದು ಮತ್ತೊಬ್ಬ ಕಳ್ಳನು ಕೇಳಿದನು.

"ಅದನ್ನು ತಿಳಿಯಬೇಕೆಂತಲೇ ನಾನೀಗ ಹೊರಟಿದ್ದೇನೆ ತಿಳಿಯಿತೆ ? ಅಸಲು ನನ್ನ ಹೆಂಡತಿ ಅಲ್ಲಿ ಯಾದರೂ ಇದ್ದಾಳೋ ಇಲ್ಲವೋ ಅಂತ ನಾನು ಸತ್ತುಕೊಂಡಿದ್ದರೆ, ನಡುವೆ ನಿಮ್ಮ ಹಾಳು ಪ್ರಶ್ನೆ



ಗಳೇನಿದು ! ನನ್ನನ್ನು ಕಳ್ಳನೆಂದುಕೊಂಡಿರೇನು ?" ಎಂದು ರೇಗಿ ಗರ್ಜಿಸಿ ಹೇಳಿದನು ಬಲಭದ್ರ.

ಆ ಮಾತು ಕಳ್ಳರನ್ನು ಇನ್ನಷ್ಟು ಗಲಿಬಿಲಿಗೊಳಿಸಿತು. ಈ ಕಾಡಿನಲ್ಲಿ ತಮ್ಮನ್ನು ನೋಡಿದವರು ಯಾರಾದರೂ ಹೆದರುತ್ತಾರೆ. ಈ ಮನುಷ್ಯ ಇಷ್ಟು ಧೈರ್ಯದಲ್ಲಿದ್ದರೆ, ಇಷ್ಟು ಕೋಪದಿಂದ ಮಾತಾಡಬೇಕಾದರೆ ಹಿಂಬಲವಿದ್ದೇ ಇರಬೇಕು. ಸಮೀಪದಲ್ಲೇ ಎಲ್ಲೋ ಅಡಗಿಕೊಂಡಿರಬೇಕು ಇವನ ಸಹಾಯಕರು.

ಇಂತಹ ಅನುಮಾನದಿಂದ ಕಳ್ಳರು ಬಲಭದ್ರನೊಂದಿಗೆ ಮತ್ತೆ ಕೆಲವು ಪ್ರಶ್ನೆಗಳನ್ನು ಕೇಳಿದರು. ಅವುಗಳಿಗೆ ಅವನು ಸರಿಯಾದ ಉತ್ತರ ಕೊಡದೆ, ಹುಬ್ಬು ತಿರುಗಿಸಿ, ಕಣ್ಣು ಹೊರಳಿಸಿ ಕೋಪೋದ್ಗಾರ ತೆಗೆದುಕೊಂಡು ಅಲ್ಲಿಂದ ಎದ್ದು ಹೋಗತೊಡಗಿದನು.

ಕಳ್ಳರಲ್ಲಿ ಒಬ್ಬನು ಉಳಿದವರೊಂದಿಗೆ, "ಇವನು ಹೇಳುವುದರಲ್ಲಿ ಒಂದೂ ನಿಜವಿಲ್ಲ. ಇವನ ಮೊಂಡು



ಧೈರ್ಯ ನೋಡಿದರೆ ನಮ್ಮನ್ನು ರೇಗಿಸಲಿಕ್ಕೇ ಬಂದವನ ಹಾಗಿದೆ. ರಾಜಭಟನೆಂದೇ ಕಾಣುತ್ತದೆ. ಸಿಳ್ಳುಹಾಕಿದ ಕೂಡಲೇ ಇವನ ಕಡೆಯವರು ಓಡಿ ಬಂದಾರು. ಇಂಥವನನ್ನು ಒಳ್ಳೆಯ ಮಾತಿನಿಂದ ಸಂತೃಪ್ತಿಪಡಿಸದೆ ಹೋದರೆ ನಮಗೇ ಅಪಾಯ. ಏನನ್ನುವಿರಿ? " ಎಂದನು.

ಉಳಿದ ಕಳ್ಳರು ಕೂಡಾ ಆವನ ಮಾತಿಗೆ ತಲೆಯಾಡಿಸಿದರು. ಕೂಡಲೇ ಅವರೆಲ್ಲ ಬೇಗಬೇಗನೇ ಓಡಿ, ಬಲಭದ್ರನನ್ನು ಸಂಧಿಸಿ, "ಅಯ್ಯಾ, ನಾವೇನೋ ಹೊಟ್ಟೇಕಾಟದಿಂದ ಕಳ್ಳತನ ಮಾಡುತ್ತ, ಬದುಕಿಕೊಂಡಿದ್ದೇವೆ. ನೀವು ನಮ್ಮ ವಾಸಸ್ಥಳವನ್ನು ಕುರಿತು ಯಾರಿಗಾದರೂ ಹೇಳಿ ನಮ್ಮನ್ನು ಸಿಕ್ಕಿಸಿ ಹಾಕಬೇಡಿರಯ್ಯಾ, ನಿಮ್ಮ ಪುಣ್ಯ! ನಮ್ಮ ಕೈಲಾದಷ್ಟು ನಿಮಗೆ ಸಮರ್ಪಿಸುತ್ತೇವೆ. ಒಲ್ಲೆನೆನ್ನಬಾರದು" ಎಂದು ಪ್ರಾರ್ಥಿಸಿಕೊಂಡರು. ಆವರ ಮಾತು ಕೇಳಿ ಬಲಭದ್ರನು ಆಶ್ಚರ್ಯಪಡುತ್ತ, ಅವರನ್ನು ನೆಟ್ಟು ನೋಡುತ್ತ, "ನನ್ನನ್ನು ಯಾರೆಂದುಕೊಂಡಿರಿ ? " ಎಂದು ಕೇಳಿದನು.

"ಗೊತ್ತಿದೆ ಅಯ್ಯಾ, ಇಂತಹ ಅಪಾಯಕರವಾದ ಸ್ಥಳಕ್ಕೆ ಬಂದು ಕೂಡಾ, ನಮ್ಮ ಮೇಲೆ ಕೋಪ ತೋರಿಸುವಿರೆಂದರೆ, ನೀವು ಮಹಾರಾಜರ ಕಡೆಯವರಲ್ಲದೆ ಬೇರೆ ಯಾರೂ ಅಲ್ಲವೆಂದು ಗೊತ್ತಾಗಿದೆ. ನೀವು ನಮ್ಮ ಗುಹೆಯ ಮುಂದೆಯೇ ಕುಳಿತಿದ್ದಿರೆಂದರೆ, ನಾವಿರುವ ಜಾಗ ಕೂಡಾ ನಿಮಗೆ ತಿಳಿದಿದೆ. ನಾವೀಗ ನಿಮ್ಮ ಮೇಲೆ ಏನಾದರೂ ಕೆಡುಕು ಮಾಡಲಿಕ್ಕೆ ನೋಡಿದರೆ ದೂರದಲ್ಲಿ ಹೊಂಚಿಕೊಂಡಿರುವ ನಿಮ್ಮ ಅನುಚರರು ಓಡಿಬರುವರೆಂತಲೂ ನಮಗೆ ಗೊತ್ತು. ನಿಮ್ಮ ಪುಣ್ಯ. ನಮ್ಮ ಸಂಗತಿ ಹೊರಗೆ ಹಾಕಬೇಡಿ" ಎಂದನು ಒಬ್ಬ ಕಳ್ಳ.

ಅಷ್ಟರಲ್ಲಿ ಮತ್ತೊಬ್ಬ ಕಳ್ಳನು ಒಂದು ಮೂಟೆಯನ್ನು ತಂದು ಬಲಭದ್ರನಿಗೆ ಕೊಟ್ಟನು. ಆ ಮೂಟೆಯಲ್ಲಿ ಧಗಧಗನೆ ಹೊಳೆಯುವ ವಜ್ರಗಳಿದ್ದುವು.

ಬಲಭದ್ರನು ಮತ್ತೇನೂ ಮಾತಾಡಲಿಲ್ಲ. "ಸರಿ ಸರಿ" ಎಂದಷ್ಟೇ ಹೇಳಿ ಮೂಟೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಟನು. ಆಗ ಕಳ್ಳರು ಅವನನ್ನು ನೋಡಿ, "ನಮ್ಮನ್ನು ಇಲ್ಲಿ ನೋಡಿದೆವೆಂದು ಇನ್ನೊಂದು ಸಾರಿ ಇಲ್ಲಿಗೆ ಬಂದರೆ, ಅಥವಾ ಮತ್ತಿಷ್ಟು ಹಣ ಬೇಕೆಂದು ಕೇಳಲು ಬಂದರೆ ನಾವು ಇಲ್ಲಿ ಇರಲಿಕ್ಕೇ ಇಲ್ಲ. ನಮ್ಮ ವಾಸಸ್ಥಳವನ್ನು ಬೇರೆ ಕಡೆಯಲ್ಲಿ ಏರ್ಪಡಿಸಿಕೊಳ್ಳುತ್ತೇವೆ" ಎಂದರು.

ಬಲಭದ್ರನು ತಲೆಯಾಡಿಸಿ ಅಲ್ಲಿಂದ ಹೋಗಿ, ಮತ್ತಾರನ್ನೋ ಕೇಳಿ ರಾಮಪುರದ ದಾರಿಯನ್ನು ತಿಳಿದು ಅಲ್ಲಿಗೆ ಹೋಗಿ ಸೇರಿದನು. ಕೆಲವರನ್ನು ವಿಚಾರಿಸಿದಾಗ, ಹೊಸದಾಗಿ ಬಂದ ಹೆಂಗುಸೊಬ್ಬಳು ಗಂಗರಾಜನೆಂಬವನ ಮನೆಯಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದಾಳೆಂಬ ಸಂಗತಿ ಗೊತ್ತಾಯಿತು. ಅವನು

ಅಲ್ಲಿಗೆ ಹೋದ ಸಮಯದಲ್ಲಿ ಶಾಂತೆ ಕಸಪೊರಕೆ ಹಿಡಿದುಕೊಂಡು ಕಸ ಬಳಿಯುತ್ತಾ ಇದ್ದಳು. ಬಲಭದ್ರನನ್ನು ನೋಡಿದ ಕೂಡಲೇ ಅವಳು ಮನೆಯೊಳಗೆ ಹೋಗಿಬಿಟ್ಟಳು.

ಆಗ ಹೊಲದ ಕಡೆಯಿಂದ ಮನೆಗೆ ಬಂದ ಗಂಗರಾಜನು ಬಲಭದ್ರನನ್ನು ನೋಡಿ, "ಯಾರು? ಏನು ಬಂದೆ?" ಎಂದು ಕೇಳಿದನು.

ಬಲಭದ್ರನು ತನ್ನ ಊರು, ಹೆಸರು ಹೇಳಿ, ಶಾಂತೆಯನ್ನು ಕುರಿತು ಸೂಚಿಸಿ, "ಇಲ್ಲಿ ಇದ್ದಾಳೆಯೇ?" ಎಂದು ಕೇಳಿದನು.

"ಇದ್ದಾಳೆ. ತುಂಬಾ ಒಳ್ಳೆಯವಳು. ಬಹಳ ಚುರುಕಿನವಳು. ಬೆಳಿಗ್ಗೆಯಿಂದ ರಾತ್ರಿ ಮಲಗಲು ಹೋಗುವವರೆಗೂ ಬಗ್ಗಿಸಿದ ಸೊಂಟವನ್ನು ಎತ್ತದೆ ಕೆಲಸ ಮಾಡುತ್ತಾಳೆ. ಅಂತಹ ಕೆಲಸದವಳು ಸಿಗುವುದು ನಮ್ಮ ಅದೃಷ್ಟ" ಎಂದನು ಗಂಗರಾಜ.

"ನಾನು ಅವಳೊಂದಿಗೆ ಸ್ವಲ್ಪ ಮಾತಾಡಬೇಕಿತ್ತು" ಎಂದನು ಬಲಭದ್ರ.

ಗಂಗರಾಜನು ಶಾಂತೆಯನ್ನು ಕರೆದನು. ಬಲಭದ್ರನು ಅವಳನ್ನು ಗೋಡೆಯಾಚೆ ಬದಿಗೆ ಕರೆದುಕೊಂಡು ಹೋಗಿ, "ಏನು ಬಂತು ನಿನಗೆ? ನಮ್ಮ ಮನೆಯಲ್ಲಿ ಇಷ್ಟು ಕೆಲಸಗಳಿದ್ದುವೇನು? ಹಾಯಾಗಿ ಮನೆಯಲ್ಲಿರುವುದನ್ನು ಬಿಟ್ಟು, ಇಷ್ಟು ದೂರ ಬಂದು ಕೆಲಸದವಳಾಗಿ ಏತಕ್ಕೆ ಬದುಕುವಿ?" ಎಂದು ಕೇಳಿದನು.

"ನಿಮ್ಮಲ್ಲಿದ್ದು ಏನು ಪ್ರಯೋಜನ? ಇಲ್ಲಿ ದಿನವಿಡೀ ಕೆಲಸ ಮಾಡುತ್ತಿದ್ದರೂ ಶ್ರಮವೇ ಗೊತ್ತಾಗುವುದಿಲ್ಲ. ಎಷ್ಟು ಕೆಲಸ ಮಾಡಿದರೂ ಒಂದು ಒಳ್ಳೆಯ ಮಾತು ಹೇಳಿ ಮೆಚ್ಚುವವರಿದ್ದರೆ ಶ್ರಮವೇ ತಿಳಿಯದು" ಎಂದಳು ಶಾಂತೆ.

"ಆದರೆ ನಾನು ನಿನ್ನನ್ನು ಎಂದೂ ಮೆಚ್ಚಲಿಲ್ಲವೆಂದು ತಾನೇ ನೀನು ಹೇಳುವುದು? ನನಗೆ ನಿನ್ನ



ಮೇಲೆ ಎಷ್ಟು ಪ್ರೇಮವಿದೆಯೆಂದು ನಿನಗೇನು ಗೊತ್ತು!" ಎಂದು ಬಲಭದ್ರನು, ಅವಳನ್ನು ತಾನು ಎಲ್ಲೆಲ್ಲಾ ಹುಡುಕಾಡಿದೆನೆಂಬುದನ್ನು ಹೇಳಿ, "ಈ ಊರಿಗೆ ಹತ್ತಿರದ ದಾರಿ ಎಂದುಕೊಂಡು, ಅಪಾಯಕಾರಿಯಾದ ಅರಣ್ಯದೊಳಗಿಂದಾಗಿ ಬಂದಿದ್ದೇನೆ ಗೊತ್ತಾ?" ಎಂದನು.

ಗಂಡನ ಮುಖವನ್ನು ನೋಡಿ, ಅವನು ನಿಜವನ್ನೇ ಹೇಳುವನೆಂದು ಶಾಂತೆಗೆ ಅರ್ಥವಾಯಿತು. ಅವಳು ಸ್ವಲ್ಪ ಮೆತ್ತಗಾಗಿ, "ಹಾಗಾದರೆ ನೀವು ಕೂಡಾ ಇಲ್ಲಿಗೇ ಬಂದು ಇದ್ದುಬಿಡಿರಿ. ಅಲ್ಲಿರುವ ಆಸ್ತಿ, ಪೂರಾ ಮಾರಿ, ಇಲ್ಲಿ ಕೊಂಡುಕೊಳ್ಳೋಣ. ನೀವು ಹೊಲದ ಕೆಲಸ ನೋಡಿಕೊಳ್ಳಿ. ನಾನು ಈ ಮನೆಯಲ್ಲಿ ಕೆಲಸ ಮಾಡುತ್ತೇನೆ. ಈ ಮನೆಯವರು ಬಹಳ ಒಳ್ಳೆಯವರು. ಇಬ್ಬರೂ ಸಂಪಾದಿಸಿಕೊಂಡಿದ್ದರೆ ಬಿಸಿನೀರಿಗೆ ತಣ್ಣೀರು ಬೆರೆಸಿದಂತೆ ಸೊಗಸಾಗಿರುತ್ತದಷ್ಟೆ?" ಎಂದಳು.

"ನೀನು ಇನ್ನೊಬ್ಬರ ಮನೆಯಲ್ಲಿ ಕೆಲಸ ಮಾಡುವ ಅಗತ್ಯವೇನಿದೆ? ಇನ್ನೊಂದು ವಿಶೇಷ ಕೇಳು. ನಮಗೆ ಅಂದುಕೊಳ್ಳದಂತೆಯೇ ಹೇರಳ ಧನ ಬಂದಿದೆ. ಪಟ್ಟಣಕ್ಕೆ ಹೋಗಿ ಒಳ್ಳೆಯ ಮನೆ ಕೊಂಡುಕೊಂಡು ಮಹಾರಾಜರ ಹಾಗೆ ಬದುಕ ಬಹುದು" ಎಂದನು ಬಲಭದ್ರ.

ಶಾಂತೆ ಆಶ್ಚರ್ಯಪಡುತ್ತ, "ಎಲ್ಲಾ ಸುಳ್ಳು! ನನ್ನನ್ನು ಕರೆದುಕೊಂಡು ಹೋಗಲು ಮಾಯದ ಮಾತು ಹೇಳುವಿರಿ" ಎಂದಳು.

"ಇಕೋ ನೋಡು!" ಎಂದು ಬಲಭದ್ರನು ತನ್ನ ಮೂಟೆಯಲ್ಲಿರುವ ವಜ್ರಗಳನ್ನು ಶಾಂತೆಗೆ ತೋರಿಸಿದನು.

ಶಾಂತೆ ಬೆರಗಾಗಿ "ಈ ವಜ್ರಗಳು ಎಲ್ಲಿಂದ? ಇದ್ದಕ್ಕಿದ್ದ ಹಾಗೆ ಇಷ್ಟೊಂದು ಐಶ್ವರ್ಯ ಹೇಗೆ ಸಿಕ್ಕಿತು?" ಎಂದಳು.

ನನ್ನ ಕೋಪದ ಗುಣವನ್ನು ನೀನು ಬಯ್ಯುವಿ ಯಾದರೂ, ಅದೇ ನಮಗೆ ಇಷ್ಟು ದೊಡ್ಡ ಅದೃಷ್ಟ ವನ್ನು ಕೊಟ್ಟಿದೆ.

ನನ್ನ ಕೋಪಕ್ಕೆ ಹೆದರಿ ಕಳ್ಳರು ಇಷ್ಟನ್ನೆಲ್ಲಾ ನನಗೆ ಕೊಟ್ಟು ಸಮಾಧಾನ ಪಡಿಸಿದರು" ಎಂದನು ಬಲಭದ್ರ. ಹಾಗು ನಡೆದ ಸಂಗತಿಯನ್ನೆಲ್ಲಾ ವಿವರಿಸಿ ಹೇಳಿದನು.

ಅದನ್ನೆಲ್ಲಾ ಕೇಳಿ ಶಾಂತೆ ಗಾಬರಿಯಾದವಳಂತೆ, "ನೀವು, ಇನ್ನೇನೂ ನನಗೆ ಹೇಳಬೇಕಾಗಿಲ್ಲ. ನಾನು ನಿಮ್ಮ ಕೋಪವನ್ನು ತಾಳಲಾಗದೆ ಮನೆ ಬಿಟ್ಟು ಬಂದುಬಿಟ್ಟೆ. ಆಮೇಲಾದರೂ ನಿಮ್ಮ ಕೋಪವು ತಗ್ಗಿ ಬುದ್ಧಿ ಬಂದೀತು ಅಂದುಕೊಂಡೆ. ಕೋಪವೇ ಅದೃಷ್ಟವೆನ್ನುವ ನೀವು ಎಂದಿಗೂ ಆ ಕೋಪವನ್ನು ಬಿಡುವ ಹಾಗಿಲ್ಲ. ಅಂದಮೇಲೆ ನಾನು ನಿಮ್ಮೊಂದಿಗೆ ಮನೆಗೆ ಬರಲಾರೆ" ಎಂದಳು.

ಬಲಭದ್ರನು ಸಣ್ಣ ಮೋರೆ ಮಾಡಿಕೊಂಡು, "ಶಾಂತಾ, ಅಷ್ಟು ಅವಸರಪಡಬೇಡ. ನನ್ನಲ್ಲಿರುವ ವಿಪರೀತವಾದ ಕೋಪ ಅದೃಷ್ಟಕ್ಕೆ ಮಾತ್ರವಲ್ಲ, ದುರದೃಷ್ಟಕ್ಕೂ ಕಾರಣವಾಗುತ್ತದೆಂದು ಈಗ ಗೊತ್ತಾಯಿತು! ಅದೃಷ್ಟ ಒಂದೇ ಸಾರಿ ಬರು ವಂಥಾದ್ದು. ಅದು ಸಾಕು! ದುರದೃಷ್ಟ ಸಹಿಸ ಲಾಗದ್ದು. ಇನ್ನು ಕೋಪ ಬಂದರೆ ಕೇಳು. ಮನೆಗೆ ಹೋಗೋಣ" ಎಂದನು.

ತಾನು ಮನೆಬಿಟ್ಟ ಮೇಲೆ ಗಂಡನಿಗೆ ಬಂದ ಅನುಭವಗಳಿಂದ, ಇನ್ನು ಕೋಪದ ಮೇಲೆ ಕೋಪಿಸಿ ಜಯಿಸುವನೆಂದು ಶಾಂತೆಗೆ ತಿಳಿಯಿತು. ಹಾಗಿಲ್ಲದಿರು ತ್ತಿದ್ದರೆ, ತಾನು ಮನೆಗೆ ಬಾರೆನೆಂದ ಕೂಡಲೇ ಕೋಪ ದಿಂದ ಉರಿದು ಬೀಳಬೇಕಿತ್ತು. ಹೀಗೆ ಯೋಚಿಸಿ ಶಾಂತೆ ಗಂಡನೊಂದಿಗೆ ಹೊರಡಲು ತಯಾರಾದಳು.





# ಜಾಣತನ

ಹಿಂದೆ ಧರ್ಮಾವರದಲ್ಲಿ ಸೋಮೇಶ್ವರರೆಂಬವರು ಜಮೀನ್ದಾರರಾಗಿದ್ದರು. ಅವರಿಗಿರುವ ಒಂದು ಕಷ್ಟವೇನೆಂದರೆ, ರಾತ್ರಿ ಮಲಗಿ ನಿದ್ದೆ ಹಿಡಿದುಬಿಟ್ಟರೆ, ಬೆಳಿಗ್ಗೆ ಅಂದುಕೊಂಡ ಹೊತ್ತಿಗೆ ಏಳಲಾಗುತ್ತಿದ್ದಿಲ್ಲ. ಅದರಿಂದ ಅಗತ್ಯ ಕೆಲಸಗಳಿಗೆ ಅಂತರಾಯ ಬರುತ್ತಿತ್ತು. ಸಕಾಲದಲ್ಲಿ ಆಗಬೇಕಾದ ಕೆಲಸ ಆಗದೆ, ತೊಂದರೆ ಬರುತ್ತಿತ್ತು,

ಅದಕ್ಕಾಗಿ ಅವರು ಬಹಳ ಆಲೋಚನೆ ಮಾಡಿ, ತನಗೆ ಬೇಕಾದ ಹೊತ್ತಿಗೆ ತನ್ನನ್ನು ಎಬ್ಬಿಸಲಿಕ್ಕಾಗಿಯೇ ಒಬ್ಬ ನೌಕರನನ್ನು ನಿಯಮಿಸಿಕೊಳ್ಳಲು ನಿಶ್ಚಯಿಸಿದರು. ಈ ಸಂಗತಿ ದಿವಾನನೊಂದಿಗೆ ಹೇಳಲು, ದಿವಾನನು ತಕ್ಕವನನ್ನು ಹುಡುಕತೊಡಗಿದನು. ಅನಂತನೆಂಬ ಯುವಕನೊಬ್ಬನು ಈ ಸಂಗತಿಯನ್ನು ತಿಳಿದುಕೊಂಡು ಆ ಕೆಲಸ ತನಗೆ ಕೊಡಿಸಬೇಕೆಂದು ದಿವಾನನ್ನು ಕೇಳಿಕೊಂಡನು. ದಿವಾನನು ಅವನನ್ನು ಕರೆದುಕೊಂಡು ಬಂದು, ಜಮೀನ್ದಾರರ ಬಳಿಗೆ ಹೋದನು.

ಜಮೀನ್ದಾರರು ಅನಂತನೊಂದಿಗೆ, “ನೋಡಪ್ಪ, ನಾನು ನಾಳೆ ಬೆಳಂಜಾವ ನಾಲ್ಕು ಗಂಟೆಗೆಲ್ಲಾ ಎದ್ದು ಪ್ರಾತಃಕೃತ್ಯ ತೀರಿಸಿ ನರಸಾಪುರಕ್ಕೆ ಹೋಗಬೇಕಾಗಿದೆ. ಸರಿಯಾಗಿ ನಾಲ್ಕು ಗಂಟೆಗೆ ನನ್ನನ್ನು ಎಬ್ಬಿಸಿಬಿಡು” ಎಂದರು.

ಹೇಳಿದ ಹಾಗೆಯೇ ಅನಂತನು ಸಮಯಕ್ಕೆ ಸರಿಯಾಗಿ ಜಮೀನ್ದಾರರನ್ನು ನಿದ್ದೆಯಿಂದ ಎಬ್ಬಿಸಿದನು.

ಆ ದಿನ ಸಾಯಂಕಾಲ ಜಮೀನ್ದಾರರು ನರಸಾಪುರದಿಂದ ತಿರುಗಿ ಬಂದು, ಅನಂತನನ್ನು ಕರೆದು, “ಸಮಯ ತಪ್ಪದೆ ಎದ್ದು ಹೋದುದರಿಂದ ಅಂದುಕೊಂಡ ಕೆಲಸವೆಲ್ಲವೂ ಸರಿಯಾಯಿತು” ಎಂದು ಅವನನ್ನು ಮೆಚ್ಚಿಕೊಂಡು “ನೋಡು, ನಾಳೆ ಬೆಳಿಗ್ಗೆ ಜಗನ್ನಾಥದವರೆಗೆ ಹೋಗಿ ಬರಬೇಕಾಗಿದೆ. ಬೆಳಂಜಾವ ಐದು ಗಂಟೆಗೆ ನನ್ನನ್ನು ನಿದ್ದೆಯಿಂದ ಎಬ್ಬಿಸು” ಎಂದು ಹೇಳಿದರು.

ಅದೇ ವಿಧವಾಗಿ ತಪ್ಪದೆ ಐದು ಗಂಟೆಗೆ ಅನಂತನು ಜಮೀನ್ದಾರರನ್ನು ನಿದ್ದೆಯಿಂದ ಎಬ್ಬಿಸಿದನು.

ಆ ದಿನ ಕತ್ತಲಾದ ಮೇಲೆ ಜಮೀನ್ದಾರರು ಜಗನ್ನಾಥದಿಂದ ತಿರುಗಿ ಬಂದು ಅನಂತನನ್ನು ಕರೆದು, “ಈ ದಿನಕ್ಕೆ ನೀನು ಕೆಲಸಕ್ಕೆ ಸೇರಿ ಎರಡು ದಿನಗಳಾದುವು. ತಿಂಗಳು ಕೂಡಾ ಈ ದಿನಕ್ಕೆ

ರಾಂಬಾಬು

ಮುಗಿಯುತ್ತದೆ. ನಾಳೆನಿಂದ ಹೊಸ ತಿಂಗಳು ಪ್ರಾರಂಭವಾಗುತ್ತೆ. ಆದುದರಿಂದ ಈ ಎರಡು ದಿನಗಳ ಲೆಕ್ಕ ನಾಲ್ಕು ವರಹಾ ಕೊಟ್ಟುಬಿಡುತ್ತೇನೆ, ನಾಳೆಯಿಂದ ತಿಂಗಳ ಆಖೈರಿಗೆ ಅರುವತ್ತು ವರಹಗಳನ್ನು ಸಂಬಳವಾಗಿ ಕೊಡುತ್ತೇನೆ" ಎಂದು ಹೇಳಿ ಅವನ ಕೈಗೆ ನಾಲ್ಕು ವರಹಗಳನ್ನು ಕೊಟ್ಟರು.

ಅನಂತರ ಜಮೀನ್ದಾರರು ಮನೆಯೊಳಗೆ ಹೋಗಿ ಬಟ್ಟೆ ಬದಲಾಯಿಸಿಕೊಂಡು, ಹೊರ ಜಗಲಿಗೆ ಬರುವಾಗ, ಅನಂತನು ಮತ್ತೊಬ್ಬ ಯುವಕನಿಗೆ ಎರಡು ವರಹಗಳನ್ನು ಕೊಡುವುದು ಕಂಡಿತು. "ಎರಡು ದಿನಗಳಿಗೆ ನಾಲ್ಕು ವರಹ ಸಿಕ್ಕಿವೆ" ಎಂದ ಮಾತೂ ಕೇಳಿತು.

ಜಮೀನ್ದಾರರು ಆಶ್ಚರ್ಯದಿಂದ, "ಯಾರು ಅವನು? ಅವನಿಗೆ ಎರಡು ವರಹಾ ಏತಕ್ಕೆ ಕೊಟ್ಟೆ?" ಎಂದು ಕೇಳಿದರು.

ಅನಂತನು ತಬ್ಬಿಬ್ಬಾಗಿ, "ಅದು...ಅದು... ಅವನು..." ಎಂದು ತಡವರಿಸಿದನು.

ಜಮೀನ್ದಾರರು ಕೋಪದಿಂದ, "ನಿಜ ಹೇಳಲಿಕ್ಕೆ ಭಯಪಡುವ ಕಾರಣವೇನು? ಗುಟ್ಟೇಕೆ?" ಎಂದರು ದರ್ಪದಿಂದ.

ಅನಂತನು ಹೆದರುತ್ತ, "ಈ ಎರಡು ದಿನಗಳೂ ನೀವು ಹೇಳಿದ ಸಮಯಕ್ಕೆ ಕಾಲು ಗಂಟೆಯು ಮೊದಲು ನನ್ನನ್ನು ನಿದ್ದೆಯಿಂದ ಎಬ್ಬಿಸಬೇಕೆಂದು ಅವನಿಗೆ ಹೇಳಿ, ನೀವು ಕೊಡುವುದರ ಅರ್ಧವನ್ನು ಅವನಿಗೆ ಕೊಡುತ್ತೇನೆಂದಿದ್ದೇನೆ. ಮತ್ತೇನಿಲ್ಲ ಸ್ವಾಮೀ!" ಎಂದನು.

ಅವನು ಹೇಳಿದುದನ್ನು ಕೇಳಿ ಜಮೀನ್ದಾರರಿಗೆ, ಅನಂತನು ಕೂಡಾ ನಿದ್ದೆಯಿಂದೇಳುವ ವಿಷಯದಲ್ಲಿ ತನ್ನಂಥವನೇ ಎಂದು ತಿಳಿದುಹೋಯಿತು. ಆದರೂ ಅವನ ಜಾಣತನಕ್ಕೆ ತನ್ನೊಳಗೇ ನಗುತ್ತ, "ಲೋ ಅನಂತಾ! ನಾಳೆಯಿಂದ ನಿನಗೆ ತೋಟಕ್ಕೆ ನೀರು ಹಾಕುವ ಕೆಲಸ ಕೊಡುತ್ತೇನೆ. ಇದೇ ಸಂಬಳ!" ಎಂದು ಹೇಳಿ, ಆ ಹೊಸ ಯುವಕನನ್ನು ಕರೆದು, "ಈ ಎರಡು ದಿನಗಳಿಂದ ಅನಂತನು ಮಾಡುವ ಕೆಲಸ ಮಾಡಲು ನಿನಗೆ ಒಪ್ಪಿಗೆ ಇದೆಯೋ?" ಎಂದು ಕೇಳಿದರು.

ಅವನು ಇಷ್ಟವಿದೆ ಎಂಬಂತೆ ತಲೆಯಾಡಿಸಿದನು. ಜಮೀನ್ದಾರರು ಅವನ ಮುಖವನ್ನು ಪರೀಕ್ಷಿಸಿ ನೋಡುತ್ತ, "ಈಗ ನೀನು ಅನಂತನ ಕೈಯಿಂದ ತೆಗೆದುಕೊಂಡ ಎರಡು ವರಹಗಳಲ್ಲಿ ಮತ್ತೊಬ್ಬನಿಗೆ ಭಾಗವಿಲ್ಲವಷ್ಟೆ?" ಎಂದು ಕೇಳಿದರು.

ಯುವಕನು ಜಮೀನ್ದಾರರ ಹಾಸ್ಯ ಪ್ರಶ್ನೆಯನ್ನು ಅರ್ಥಮಾಡಿಕೊಂಡು, "ಅಯ್ಯೋ, ಇದು ಪೂರ್ತಿ ನನ್ನ ಸ್ವಂತದ್ದೇ" ಎಂದನು ನಗುತ್ತಾ.






### ೨. ವೀರಭದ್ರ ವಿಜಯ

ಶಿವನಿಗೆ ಇಷ್ಟವಿಲ್ಲದಿದ್ದರೂ ತನ್ನ ತಂದೆಯನ್ನು ಹೇಗಾದರೂ ಮಾಡಿ ಶಿವನ ಮೇಲೆ ಗೌರವಾದರ ಹುಟ್ಟುವಂತೆ ಮಾಡಬಲ್ಲೆನೆಂಬ ಆತ್ಮ ವಿಶ್ವಾಸದಿಂದ ಸತೀದೇವಿ, ನಂದೀಶ್ವರನನ್ನು ತನ್ನೊಂದಿಗೆ ಕರೆದುಕೊಂಡು ದಕ್ಷನ ಯಜ್ಞ ಶಾಲೆಯ ಬಳಿಗೆ ಬಂದಳು.

ಆಗ ಅವಳ ತಾಯಿ ಪ್ರಸೂತಿಯೂ, ಸಹೋದರರೂ ಇದಿರಾಗಿ ಸತಿಯ ಹತ್ತಿರ ಬಂದು ಕುಶಲ ಪ್ರಶ್ನೆ ಮಾಡಿದರು. ಸತೀದೇವಿಯೊಂದಿಗೆ ತಾಯಿ ಪ್ರಸೂತಿ ರಹಸ್ಯವಾಗಿ, "ನಿನ್ನ ತಂದೆಗೆ ವೃದ್ಧಾಪ್ಯದ ಭ್ರಾಂತಿ ಬಂದುಬಿಟ್ಟಿತು. ಅವರು ನಿನ್ನ ಪತಿಯನ್ನು ನಿಂದಿಸಿಕೊಂಡೇ ಇದ್ದಾರೆ. ನೀನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಸುಮ್ಮನಿರಬೇಕು, ತಿಳಿಯಿತೇ?" ಎಂದು ಹೇಳಿ, ಅವಳನ್ನು ಮೆಲ್ಲನೆ ಯಜ್ಞಶಾಲೆಯೊಳಗೆ ಕರೆದುಕೊಂಡು ಹೋದಳು.

ಮಗಳನ್ನು ನೋಡಿದ ಕೂಡಲೇ ದಕ್ಷನಲ್ಲಿ ಶಿವನ ಮೇಲಿನ ಕೋಪವು ಭಗ್ಗನೆ ಉರಿಯಿತು. ಅವನು ಮಗಳನ್ನು ನೋಡಿ, "ಏಕೆ ಬಂದೆ? ಯಾರು ಕರೆದರು? ನಿನ್ನ ಗಂಡ ಸ್ಮಶಾನವಾಸಿ. ಪಿಶಾಚಿಗಳನ್ನು ಆಳುವವನು. ಕಪಾಲಗಳನ್ನು ಧರಿಸುವವನು. ಹೀಗೆ ಅಪವಿತ್ರನಾಗಿರುವವನು ಪವಿತ್ರವಾದ ಯಜ್ಞಯಾಗಗಳಿಗೆ ಬರಲು ಅರ್ಹನಲ್ಲ. ಅದಕ್ಕೇ ಅವನನ್ನು ಕರೆಯಲಿಲ್ಲ. ಅವನಿಗೆ ಯಾಗದಲ್ಲಿ ಭಾಗ ಕೊಡಲೂ ಸಾಧ್ಯವಿಲ್ಲ. ಕೊಡುವುದೂ ತಪ್ಪೇ. ಅವನ ಹೆಂಡತಿಯಾಗಿರುವ ನೀನೂ ಅಪವಿತ್ರಳಾಗಿರುವಿ. ನಿನ್ನ ಗಂಡನನ್ನು ನಾನು ಕರೆಯದಿರುವಾಗ ನೀನು ಅಧಿಕಪ್ರಸಂಗದಿಂದ ಏಕೆ ಬಂದೆ? ಯಜ್ಞವನ್ನು ಅಪವಿತ್ರ ಮಾಡಬೇಕೆಂದು ಬಂದೆಯಾ?" ಎಂದನು.

ಆ ಮಾತುಗಳನ್ನು ಕೇಳಿ ಸತೀದೇವಿ ತಂದೆಯೊಂದಿಗೆ, "ಯಜ್ಞಕರ್ತನಾದ ಶಿವನನ್ನು ಬಿಟ್ಟು, ಹವಿರ್ಭಾಗ ಕೊಡದೆ ಯಜ್ಞಮಾಡುವುದುಂಟೆ? ಅದರ ಮೇಲೆ ಆತನನ್ನು ದೂಷಿಸುವೆ! ಈಗಾದರೂ ಸಮಯ ಮೀರಿಲ್ಲ. ಆತನನ್ನು ಕರೆಯಿಸು. ಯಜ್ಞಭಾಗವನ್ನು ಕೊಟ್ಟು ಗೌರವಿಸು. ಇಲ್ಲದಿದ್ದರೆ ಅಪ್ಪಾ,



ನಿನ್ನ ಯಜ್ಞವು ಪೂರ್ತಿಯಾಗುವಂತಿಲ್ಲ. ನೀನೂ ನಾಶವಾಗುವಿ!" ಎಂದಳು.

ಸಭೆಯಲ್ಲಿದ್ದ ಭೃಗು ಮೊದಲಾದವರು ಸತೀ ದೇವಿ ಹೇಳಿದ ಹಾಗೆ ಮಾಡುವುದೇ ಯುಕ್ತವೆಂದು, ಅವಳು ಹೇಳಿದುದು ನಿಜವೆಂದು ದಕ್ಷನಿಗೆ ಹಿತ ವಚನ ಹೇಳಿದರು.

ಆಗ ದಕ್ಷನು ಮತ್ತಿಷ್ಟು ಕೋಪದಿಂದ, "ಎಲೇ ಸತೀ! ನಿನ್ನ ಮುಖವನ್ನು ನೋಡಿದರೇನೇ ಪಾಪ ಬರುತ್ತದೆ, ನೀನು ಯಜ್ಞಶಾಲೆಯಿಂದ ತತ್‌ಕ್ಷಣ ಹೊರಟು ಹೋಗುವಿಯಾ, ಬಲವಂತದಿಂದ ದೂಡಿಸಿಕೊಳ್ಳುವಿಯಾ?" ಎಂದು ಕೂಗಿದನು ದಕ್ಷ.

ಸತೀದೇವಿಯ ಹೃದಯವು ಉರಿಯ ತೊಡಗಿತು. ಗಂಡನ ಮಾತನ್ನು ಕೇಳದೆ ಬಂದುದು ದೊಡ್ಡ ತಪ್ಪಾಯಿತೆಂದು ಅವಳಿಗೆ ಈಗ ಗೊತ್ತಾಯಿತು. ಈ ಅವಮಾನವನ್ನು ಹೊತ್ತುಕೊಂಡು ಪತಿಯ ಬಳಿಗೆ ಯಾವ ಮುಖದಿಂದ ಹೋಗಲಿ? ಇಂಥಾ ಜನ್ಮ ಇನ್ನು ಸಾಕು. ಇವನಿಗೆ ಮಗಳಾದ ನಾನು ಇಲ್ಲಿಯೇ ದಗ್ಧಳಾಗುತ್ತೇನೆ. ಮುಂದಿನ ಜನ್ಮದಲ್ಲಿ ಶಿವನೇ ಗಂಡನಾಗಲಿ!" ಎಂದು ಯೋಗಶಕ್ತಿಯಿಂದ ಅಗ್ನಿಯನ್ನು ಹುಟ್ಟಿಸಿ, ಅದರಲ್ಲಿ ತನ್ನ ಪಂಚ ಪ್ರಾಣಗಳನ್ನೂ ಆಹುತಿ ಮಾಡಿ ಬಿದ್ದುಬಿಟ್ಟಳು.

ಸತೀದೇವಿ ಸತ್ತು ಬಿದ್ದುದನ್ನು ನೋಡಿ ನಂದೀಶ್ವರ ಮೊದಲಾದವರು ಹಾಹಾಕಾರಮಾಡುತ್ತ, ಯಜ್ಞ ಶಾಲೆಯೊಳಗೆ ಪ್ರವೇಶಿಸಲು ಧಾವಿಸಿದರು. ದಕ್ಷನ ಅಪ್ಪಣೆಯಂತೆ ಭೃಗುಮಹರ್ಷಿ ಅಭಿಚಾರ ಹೋಮ ಮಾಡಿ ನಂದೀಶ್ವರಾದಿಗಳನ್ನೆಲ್ಲ ಅಲ್ಲಿಂದ ಓಡಿಸಿಬಿಟ್ಟನು.

ಇಷ್ಟರೊಳಗೆ ನಾರದನೇ ಮೊದಲಾದ ಕೆಲವರು ಕೈಲಾಸಕ್ಕೆ ಹೋಗಿ ಶಿವನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದರು. ಅದನ್ನು ಕೇಳುತ್ತಿದ್ದ ಶಿವನಿಗೆ ರುದ್ರಾವೇಶವೇ ಬಂದುಬಿಟ್ಟಿತು. ಅಷ್ಟರಲ್ಲಿ ನಂದೀಶ್ವರ ಮುಂತಾದವರೂ ಓಡೋಡಿ ಬಂದರು. ಶಿವನು ಕ್ರೋಧದಿಂದ ಹುಂಕರಿಸುತ್ತ, ತನ್ನದೊಂದು ಜಟೆಯನ್ನು ಕಿತ್ತು ಪರ್ವತದ ಮೇಲೆ ಅಪ್ಪಳಿಸಿ ಹೊಡೆದನು. ಆಗ ಆ ಜಟೆಯಿಂದ ಭದ್ರಕಾಳಿಯೂ ವೀರಭದ್ರನೂ ಹುಟ್ಟಿದರು. ವೀರಭದ್ರನು ಸಾವಿರ ಕೈಗಳಿಂದ, ಉದ್ದವಾದ ಕೋರೆಗಳಿಂದ, ಕೋಟಿ ಸೂರ್ಯರ ಕಾಂತಿಯಿಂದ ಮಹಾ ರೌದ್ರಾಕಾರದ ಮೂರ್ತಿಯಂತೆ ಕಂಡನು. ಅವನು ಶಿವನಿಗೆ ನಮಸ್ಕಾರ ಮಾಡಿ, "ತಂದೆಯೇ! ಏನು ನಿಮ್ಮ ಆಜ್ಞೆ?" ಎಂದನು.

"ಕಂದಾ! ವೀರಭದ್ರಾ! ನೀನೂ ಭದ್ರಕಾಳಿಯೂ ನಮ್ಮ ಗಣಗಳೊಂದಿಗೆ ದಕ್ಷನ ಯಜ್ಞಶಾಲೆಗೆ ಹೋಗಿ, ಅವನ ಯಜ್ಞವನ್ನು ಧ್ವಂಸ ಮಾಡಿರಿ. ಅದರಲ್ಲಿ ಭಾಗವಹಿಸಿದವರನ್ನೆಲ್ಲಾ ದಂಡಿಸಿರಿ!" ಎಂದನು ಶಿವ.

ವೀರಭದ್ರನು ಸಿಂಹಗಳನ್ನು ಹೂಡಿದ ರಥದ ಮೇಲೆ ಏರಿಕೊಂಡು, ನಂದೀಶ್ವರ, ಚಂಡೀಶ್ವರ,



ಭೈರವ ಮೊದಲಾದ ಗಣಗಳನ್ನು ತನ್ನೊಂದಿಗೆ ಕರೆದುಕೊಂಡು ಹೊರಟನು. ಭದ್ರಕಾಳಿ ಸಿಂಹದ ಮೇಲೆ ಏರಿಕೊಂಡು ಮಹಾಕಾಳಿ, ಗೌರಿ, ಕಾತ್ಯಾಯಿನಿ, ಚಾಮುಂಡಾ ಮೊದಲಾದ ಮಹಾ ಶಕ್ತಿ ಗಣಗಳನ್ನು ತನ್ನೊಂದಿಗೆ ಕರೆದುಕೊಂಡು ಹೊರಟಳು.

ಅಲ್ಲಿ ದಕ್ಷನು ಯಾಗ ಮಾಡುವ ಸ್ಥಳದಲ್ಲಿ ಕೆಲವು ಉತ್ಪಾತಗಳು ಆಗತೊಡಗಿದುವು. ಉಲ್ಕೆಗಳು ಉದುರಿದುವು. ರಕ್ತದ ಮಳೆ ಸುರಿಯಿತು. ಆಕಾಶದಿಂದ ಹಾವುಗಳೂ, ಚೇಳುಗಳೂ, ಕ್ರಿಮಿಕೀಟಗಳೂ, ಬಿದ್ದುವು. ಯಾಗಶಾಲೆಯಲ್ಲಿದ್ದ ಕೆಲವರು ದಕ್ಷನನ್ನು ನಿಂದಿಸಲು ತೊಡಗಿದರು. ಮತ್ತೆ ಕೆಲವರು ಜೀವ ಭಯದಿಂದ ಓಡಿ ಹೋಗಲಾರಂಭಿಸಿದರು.

ಇಷ್ಟರೊಳಗೆ ವೀರಭದ್ರ, ಭದ್ರಕಾಳಿಯರು ಗಣ ಗಢಣಗಳೊಂದಿಗೆ ಧಿಮಿಧಿಮಿಸಿಕೊಂಡು ಯಾಗ ಶಾಲೆಯನ್ನು ಮುತ್ತಿಗೆ ಹಾಕಿ ಹೊರಗೆ ಬರುವವರನ್ನು ಬಾಧಿಸಲು ತೊಡಗಿದರು. ವೀರಭದ್ರನು ತನ್ನ ಪ್ರಮುಖ ಅನುಚರರೊಂದಿಗೆ ಯಾಗಶಾಲೆಯೊಳಗೆ ಪ್ರವೇಶಿಸಿದನು. ಅವರೆಲ್ಲಾ ಒಳಗಿದ್ದ ದೇವತೆಗಳನ್ನೂ ಋಷಿಗಳನ್ನೂ ಹಿಡಿದೆಳೆದು ಸಿಕ್ಕ ಸಿಕ್ಕ ಹಾಗೆ ಹೊಡೆಯತೊಡಗಿದರು. ದಕ್ಷನನ್ನು ನೋಡಿದ ಕೂಡಲೇ ವೀರಭದ್ರನಿಗೆ ತಂದೆಯಾದ ಶಿವನ ದುಃಖ ಸಂತಾಪಗಳು ನೆನಪಿಗೆ ಬಂದುವು. ಮಹಾ ರೌದ್ರತೆಯಿಂದ ದಕ್ಷನ ಮೇಲೆ ಹಾರಿ ಹಿಡಿದು ಅವನ ತಲೆಯನ್ನು ತಿರುಚಿ ಕಿತ್ತು ತೆಗೆದು ಹೋಮಕುಂಡದಲ್ಲಿ ಹಾಕಿದನು.

ಅನಂತರ ವೀರಭದ್ರನು ಋತ್ವಿಕ್ಕುಗಳನ್ನೂ, ದೇವತೆಗಳನ್ನೂ, ಯಾಗಶಾಲೆಯಲ್ಲಿದ್ದ ಉಳಿದವರನ್ನೂ ನೋಡಿ, "ಈಶ್ವರ ದ್ರೋಹಿಯಾದ ದಕ್ಷನಿಗೆ ಬಂದ ಗತಿಯನ್ನು ನೋಡಿಯೂ ಇಲ್ಲೇ ಇರುವಿರಾ? ಅವನ ಯಾಗಕ್ಕೆ ಬಂದುದಕ್ಕೆ ತಕ್ಕ ಫಲವನ್ನು ಅನುಭವಿಸಬೇಕೆಂದಿರುವಿರಾ ?" ಎಂದು ಕೆಣಕಿಕೊಂಡು ಅವರ ಮೇಲೆ ಬಿದ್ದು ಹಿಂಸಿಸಲಾರಂಭಿಸಿದನು.

ಆಗ ದಕ್ಷನ ಹೆಂಡತಿಯಾದ ಪ್ರಸೂತಿಯೂ, ಇತರ ಸ್ತ್ರೀಯರೂ ಬಂದು ಪ್ರಾರ್ಥಿಸಿ ವೀರಭದ್ರನನ್ನೂ, ಅವನ ಗಣಗಳನ್ನೂ ಶಾಂತಪಡಿಸಿದರು. ಆಮೇಲೆ ಭದ್ರಕಾಳಿಯೂ ವೀರಭದ್ರನೂ ತಮ್ಮ ಗಣ ಸೈನ್ಯಗಳೊಂದಿಗೆ ಕೈಲಾಸ ಪರ್ವತಕ್ಕೆ ಹೋಗಿ ಶಿವನಿಗೆ ನಮಸ್ಕಾರ ಮಾಡಿ ನಡೆದ ಸಂಗತಿಯನ್ನು ಹೇಳಿದರು.

ಅತ್ತ ವೀರಭದ್ರ, ಭದ್ರಕಾಳಿಯರ ಪ್ರತಾಪಗಳಿಂದ ಭಗ್ನರಾದ ದೇವತೆಗಳೂ, ಋಷಿಗಳೂ ಬ್ರಹ್ಮನ ಬಳಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿದರು. ಬ್ರಹ್ಮನು ಅವರನ್ನೆಲ್ಲಾ ಕರೆದುಕೊಂಡು ವೈಕುಂಠಕ್ಕೆ ಹೋಗಿ ಮಹಾ ವಿಷ್ಣುವಿನೊಂದಿಗೆ, ಶಿವನ ಕೋಪದಿಂದ ಹುಟ್ಟಿದ ವೀರಭದ್ರ, ಭದ್ರಕಾಳಿಯರಿಂದಾದ ಅನಾಹುತಗಳನ್ನು ಹೇಳಿದನು.



ದ್ವೇಷಿಸಿಕೊಂಡಿದ್ದ ದಕ್ಷನು ತಕ್ಕ ಫಲವನ್ನು ಅನುಭವಿಸಿದನು. ಆದರೆ ದಕ್ಷನು ಪ್ರಾರಂಭಿಸಿದ ಯಾಗವು ಪೂರ್ತಿಯಾಗದಿದ್ದರೆ, ಪ್ರಪಂಚಕ್ಕೆ ಅನಾವೃಷ್ಟಿಯುಂಟಾಗಿ ಪ್ರಾಣಿಕೋಟಿಗಳು ನಶಿಸುತ್ತವೆ. ಅದುದರಿಂದ ನೀನು ದಕ್ಷನನ್ನು ಬದುಕಿಸಿ, ಅವನ ಯಾಗವನ್ನು ಅವನಿಂದಲೇ ಪೂರ್ತಿಗೊಳಿಸಬೇಕಾಗಿದೆ. ದಯೆದೋರು ಸದಾಶಿವಾ!" ಎಂದನು.

ಶಿವನು ಅದಕ್ಕೆ ಅಂಗೀಕಾರ ಸೂಚಿಸಿ, "ಸರಿ, ನಾವೆಲ್ಲರೂ ಅಲ್ಲಿಗೆ ಹೋಗೋಣ. ದಕ್ಷ ಯಾಗವು ಸುಗಮವಾಗಿ ಮುಗಿಯುವಂತೆ ಮಾಡಿ ಲೋಕವನ್ನು ಕಾಪಾಡೋಣ" ಎಂದನು.

ಎಲ್ಲರೂ ಭಗ್ನವಾದ ಯಾಗಶಾಲೆಗೆ ಬಂದರು. ಅಲ್ಲಿಯ ದೃಶ್ಯವು ತುಂಬಾ ಬೀಭತ್ಸವಾಗಿತ್ತು. ಅಗ್ನಿಕುಂಡಕ್ಕೆ ಬಿದ್ದ ದಕ್ಷನ ತಲೆ ಪೂರ್ತಿ ಸುಟ್ಟು ಕರಕಾಗಿ ಹೋಗಿತ್ತು.

ಶಿವನು ವೀರಭದ್ರನನ್ನು ನೋಡಿ "ನೀನು ಉತ್ತರ ದಿಕ್ಕಿಗೆ ಹೋಗಿ, ಉತ್ತರ ದಿಕ್ಕಿಗೆ ತಲೆಯಿಟ್ಟು ನಿದ್ರಿಸಿಕೊಂಡಿದ್ದ ತಲೆಯನ್ನು ಕಡಿದು ತೆಗೆದುಕೊಂಡು ಬಾ" ಎಂದು ಆಜ್ಞೆಮಾಡಿ ಕಳುಹಿಸಿದನು.

ವೀರಭದ್ರನು ಹಾಗೆ ಮಲಗಿದ್ದ ಒಂದು ಟಗರಿನ ತಲೆಯನ್ನು ಕಡಿದು ತೆಗೆದುಕೊಂಡು ಬಂದನು. ದಕ್ಷನ ಮುಂಡಕ್ಕೆ ಆ ಟಗರಿನ ತಲೆಯನ್ನು ತಗಲಿಸಿ ಬದುಕಿ ಏಳುವಂತೆ ಮಾಡಿದನು ಶಿವ. ಈಗ ದಕ್ಷನು ಮೊದಲಿನಂತಿರಲಿಲ್ಲ. "ಪರಮಶಿವಾ! ನಾನು ನಿನ್ನ ದೊಡ್ಡತನವನ್ನು ತಿಳಿಯದೆ ನಿನ್ನನ್ನು ದೂಷಿಸಿದೆನು. ನಿನ್ನ ದಯೆಯಿಂದ ನನಗೆ ಒಳ್ಳೆಯ ಬುದ್ಧಿಯಿಂದ ಕೂಡಿದ ತಲೆ ಏರ್ಪಟ್ಟಿದೆ, ನನ್ನ ತಪ್ಪುಗಳನ್ನು ಕ್ಷಮಿಸಿ ಕಾಪಾಡು" ಎಂದು ದಕ್ಷನು ಪ್ರಾರ್ಥಿಸಿದನು.

ಶಿವನು ದಕ್ಷನ ಕ್ಷಮಾಪಣೆಯನ್ನು ಅನುಮೋದಿಸಿ, "ದಕ್ಷಾ, ಕಾರಣವಿಲ್ಲದೆ ಯಾವ ಕಾರ್ಯವೂ ಹುಟ್ಟುವುದಿಲ್ಲ. ನಿನ್ನ ಕೋಪಕ್ಕೂ ಅಂತಹುದೇ

ಹೀಗೇನಾದರೂ ಆಗುವುದೆಂದು ತನಗೆ ಮೊದಲೇ ಗೊತ್ತಿದ್ದುದರಿಂದ ತಾನು ಅಲ್ಲಿಗೆ ಹೋಗಲಿಲ್ಲವೆಂದು ಹೇಳಿ ವಿಷ್ಣು, ಅವರೆಲ್ಲರನ್ನೂ ಕರೆದುಕೊಂಡು ಕೈಲಾಸಕ್ಕೆ ಹೊರಟನು.

ಆ ಸಮಯದಲ್ಲಿ ಶಿವನು ಧ್ಯಾನ ಸಮಾಧಿಯಲ್ಲಿ ಮುಳುಗಿದ್ದನು. ಅವನ ಸುತ್ತಲೂ ವೀರಭದ್ರ ಮೊದಲಾದ ಗಣಗಳೆಲ್ಲರೂ ಕೂಡಿಕೊಂಡಿದ್ದರು. ಮುಂದೇನು ಮಾಡಬೇಕೆಂಬ ಪ್ರಶ್ನೆ ಅವರನ್ನೆಲ್ಲಾ ಕವಿದ ಹಾಗೆ ಕಾಣುತ್ತಿತ್ತು.

ವಿಷ್ಣು, ಬ್ರಹ್ಮ ಮೊದಲಾದವರೆಲ್ಲಾ ಬಂದಿರುವುದನ್ನು ತಿಳಿದು ಶಿವನು ಕಣ್ಣು ತೆರೆದು ನೋಡಿ, ಎಲ್ಲರನ್ನೂ ಕುಳಿತುಕೊಳ್ಳುವಂತೆ ಹೇಳಿದನು.

ವಿಷ್ಣು ಶಿವನನ್ನು ನೋಡಿ, "ಸದಾಶಿವಾ, ಕೋಪವನ್ನೂ, ಚಿಂತೆಯನ್ನೂ ಬಿಟ್ಟು, ಪ್ರಕೃತಿ ಮಾಯೆಯಿಂದ ಹೊರಬಿದ್ದು, ನಮ್ಮ ಕರ್ತವ್ಯವನ್ನು ಕುರಿತು ಆಲೋಚಿಸಬೇಕಾದ ಸಮಯವಿದು. ನಿನ್ನನ್ನು

ಕಾರಣ. ಅಂತಲೇ ನಿನ್ನ ಎಲ್ಲಾ ತಪ್ಪುಗಳನ್ನೂ ಕ್ಷಮಿಸಿದ್ದೇನೆ. ಚೆನ್ನಾಗಿರು" ಎಂದನು ಶಿವ.

ದಕ್ಷನಿಂದ ವೇದೋಕ್ತ ವಿಧಿಯಂತೆ ಯಾಗವನ್ನು ಪೂರ್ತಿ ಮಾಡಿಸಲಾಯಿತು, ಯಾಗ ಭಾಗವು ತ್ರಿಮೂರ್ತಿಗಳಿಗೂ ಸರಿಯಾಗಿ ಲಭಿಸಿತು.

ಅದೆಲ್ಲಾ ಮುಗಿದ ಮೇಲೆ ಶಿವನು ದಕ್ಷನನ್ನು ನೋಡಿ, ಏನಾದರೂ ವರ ಕೇಳುವಂತೆ ಹೇಳಿದನು. ತಾನು ತನ್ನ ಹೆಂಡತಿಯೊಂದಿಗೆ ಯಾಗ ಮಾಡಿದ ಸ್ಥಳವು "ದಕ್ಷಾವಾಟಿಕೆ" ಎಂಬ ಹೆಸರಿನಿಂದ ಪ್ರಸಿದ್ಧವಾಗಬೇಕೆಂದು, ಅದು ಶಿವ ನಿಲಯವಾಗಿರಬೇಕೆಂದು ದಕ್ಷನು ಕೇಳಿಕೊಂಡನು, ಶಿವನು ಅದಕ್ಕೆ ಒಪ್ಪಿದನು. ಆಗ ಶಿವನು ಭದ್ರಕಾಳೀ ವೀರಭದ್ರರನ್ನು ನೋಡಿ, "ಈ ಪ್ರದೇಶಕ್ಕೆ ಆಗ್ನೇಯದಲ್ಲಿರುವ ಗೌತಮೀ ತೀರದಲ್ಲಿ ನೀವಿಬ್ಬರೂ ನಿಮ್ಮ ನಿಮ್ಮ ಗಣಗಳೊಂದಿಗೆ ವಾಸ ಮಾಡಿರಿ" ಎಂದನು. ಎಲ್ಲಾ ಗಣಗಳಿಗೂ ಭದ್ರಕಾಳೀ ವೀರಭದ್ರರೇ ಅಧಿಪತಿಗಳಾದರು.

ಅಷ್ಟಾದ ಮೇಲೆ ಶಿವನು ಸತೀದೇವಿಯ ಶರೀರವನ್ನು ತೆಗೆದುಕೊಂಡು ಕೈಲಾಸಕ್ಕೆ ಹಿಂದಿರುಗಿದನು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ ಋಷಿಗಳೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಶಿವನು ಸತೀದೇವಿಯ ಶರೀರವನ್ನು ತನ್ನ ಪಕ್ಕದಲ್ಲಿಟ್ಟುಕೊಂಡು ತಪಸ್ಸಿನಲ್ಲಿ ಮಗ್ನನಾದನು. ಸತಿಯ ಶರೀರವು ಶಿವನೊಳಗೇ ಐಕ್ಯವಾಯಿತು.

ದಕ್ಷನ ಕುಮಾರಿಯರಲ್ಲಿ ಸ್ವಧಾ ಎಂಬವಳು ಪಿತೃದೇವತೆಗಳಿಗೆ ಪತ್ನಿಯಾಗಿದ್ದಳು. ಅವಳಿಗೆ ಮೇನಕಾ, ಧನ್ಯಾ, ಕಳಾವತಿ ಎಂಬ ಮೂವರು ಕುಮಾರಿಯರು ಹುಟ್ಟಿದರು. ಆ ಮೂವರೂ ಒಬ್ಬರನ್ನೊಬ್ಬರು ಮೀರಿಸುವಷ್ಟು ಸುಂದರಿಯರು. ಅವರು ಸ್ವೇಚ್ಛೆಯಾಗಿ ಲೋಕಗಳಲ್ಲಿ ವಿಹರಿಸಿಕೊಂಡಿದ್ದರು.

ಒಮ್ಮೆ ಆ ಮೂವರೂ ಮಹಾಲಕ್ಷ್ಮೀ ವಿಷ್ಣುಗಳನ್ನು ದರ್ಶನ ಮಾಡಲು ವೈಕುಂಠಕ್ಕೆ ಹೋದರು.



ಮೂವರೂ ತಮ್ಮ ನೃತ್ಯ ಗಾನಗಳಿಂದ ಲಕ್ಷ್ಮೀ ನಾರಾಯಣರನ್ನು ಆನಂದಪಡಿಸಿದ ಮೇಲೆ, ಒಂದು ಕಡೆಯಲ್ಲಿ ಕುಳಿತು ಅದೂ ಇದೂ ಮಾತಾಡಿಕೊಳ್ಳುತ್ತಿದ್ದರು. ಆ ಸಮಯದಲ್ಲಿ ಬ್ರಹ್ಮ ಮಾನಸ ಪುತ್ರರಾದ ಸನಕಸನಂದನ, ಸನತ್ಸುಜಾತ, ಸನತ್ಕುಮಾರರೆಂಬವರು ವಿಷ್ಣು ದರ್ಶನಕ್ಕೆ ಬಂದರು. ವಿಷ್ಣು ಮೊದಲಾದ ಎಲ್ಲರೂ ಎದ್ದು ನಿಂತು ಇದಿರುಗೊಂಡು ನಮಸ್ಕರಿಸಿ ಅವರನ್ನು ಗೌರವಿಸಿದರು. ಆದರೆ ಮೇನಕಾ, ಧನ್ಯಾ, ಕಳಾವತಿಯರು ಮಾತ್ರ ಕುಳಿತಲ್ಲಿಂದ ಏಳಲಿಲ್ಲ.

ಅದನ್ನು ನೋಡಿ ಸನತ್ಕುಮಾರನಿಗೆ ಕೋಪ ಬಂತು. "ನಿಮಗೆ ಗರ್ವವು ಚೆನ್ನಾಗಿ ತಲೆಗೇರಿದೆ. ಇನ್ನು ಮೇಲೆ ನೀವು ಸ್ವರ್ಗದಲ್ಲಿರಕೂಡದು. ಭೂಮಿಯಲ್ಲಿರುವವರನ್ನು ಮದುವೆಯಾಗಿ ಅಲ್ಲಿಯೇ ಇರತಕ್ಕದ್ದು" ಎಂದು ಆ ಮೂವರು ಕುಮಾರಿಯರನ್ನೂ ಅವರು ಶಪಿಸಿದರು.



ಆಗ ಹೆದರಿದ ಧನ್ಯಾದಿ ಕುಮಾರಿಯರು ಪಶ್ಚಾತ್ತಾಪಪಟ್ಟು, "ಮುನೀಶ್ವರರೇ! ಅಜ್ಞಾನಿಗಳಾದ ನಮ್ಮ ತಪ್ಪುಗಳನ್ನು ಕ್ಷಮಿಸಿ, ನಮಗೆ ಶಾಪ ವಿಮೋಚನೆಯನ್ನು ಅನುಗ್ರಹಿಸಿ, ದಯೆದೋರಬೇಕು" ಎಂದು ದೈನ್ಯತೆಯಿಂದ ಬೇಡಿಕೊಂಡರು.

ಆಗ ಸನಕಸನಂದನಾದಿಗಳು ಶಾಂತರಾಗಿ, "ಗರ್ವಕ್ಕೆ ಪ್ರಾಯಶ್ಚಿತ್ತವು ಗರ್ವವು ಇಳಿದು ಹೋಗುವುದೇ. ನಿಮಗೆ ಕೊಟ್ಟ ಶಾಪವು ಲೋಕಗಳಿಗೆ ಒಳಿತು ಮಾಡುವಂತೆಯೇ ಪರಿಣಮಿಸುತ್ತದೆ. ಚಿಂತಿಸಬೇಡಿರಿ." ಎಂದರು.

(ಇದು ಹೇಗೆ ನಿಜವಾಯಿತೆಂದರೆ, ಆ ಮೂವರಿಗೆ ಹುಟ್ಟಿದ ಕುಮಾರಿಯರು ಮೂರು ಯುಗಗಳಲ್ಲಿ ಅವತಾರ ಪುರುಷರನ್ನೇ ಮದುವೆಯಾಗುವರು. ಮೇನಕೆಗೆ ಹುಟ್ಟಿದ ಪಾರ್ವತಿ ಶಿವನನ್ನು ಮದುವೆಯಾಗುತ್ತಾಳೆ. ಜನಕರಾಜನ ಪತ್ನಿ ಧನ್ಯಳಿಗೆ ಹುಟ್ಟಿದ ಸೀತೆ ರಾಮನನ್ನು ವಿವಾಹವಾಗುತ್ತಾಳೆ. ವೃಷಭನ ಪತ್ನಿ ಕಳಾವತಿಗೆ ಹುಟ್ಟಿದ ರಾಧೆ ಕೃಷ್ಣನನ್ನು ಮದುವೆಯಾಗುವಳು.)

ಹೀಗೆ ಶಾಪಾನುಗ್ರಹ ಪಡೆದ ಆ ಮೂವರು ಕುಮಾರಿಯರೂ ತೃಪ್ತರಾಗಿ ಲಕ್ಷ್ಮೀನಾರಾಯಣರ ಅಪ್ಪಣೆ ಪಡೆದು ಹೊರಟು ಹೋದರು.

ಮೇನಕೆಗೆ ತಕ್ಕ ಗಂಡನೆಂದು ದೇವತೆಗಳು ಹಿಮವಂತನನ್ನು ಆರಿಸಿಕೊಂಡರು. ಹಿಮವಂತನು ತುಂಬ ಚೆಲುವನಾಗಿದ್ದನು. ಅವನು ತನ್ನ ಬೆಟ್ಟ ಗುಡ್ಡಗಳಲ್ಲಿರುವ ಆಶ್ರಮಗಳಲ್ಲಿ ತಿರುಗುತ್ತ, ಅಲ್ಲಿರುವ ದೇವತೆಗಳ ಯೋಗಕ್ಷೇಮಗಳನ್ನೂ, ತಪಸ್ಸು ಮಾಡಿಕೊಂಡಿರುವ ಋಷಿಗಳ ಯೋಗಕ್ಷೇಮವನ್ನೂ ಶ್ರದ್ಧೆಯಿಂದ ನೋಡಿಕೊಳ್ಳುತ್ತಿದ್ದನು. ದೇವತೆಗಳು ಅಂತಹ ಹಿಮವಂತರಾಜನೊಂದಿಗೆ ಮೇನಕೆಯ ವಿವಾಹವನ್ನು ನಡೆಸಿದರು.

ಒಂದುದಿನ ಹಿಮವಂತನ ಬಳಿಗೆ ಬ್ರಹ್ಮ, ವಿಷ್ಣು, ದೇವೇಂದ್ರರು ಇತರ ದೇವತೆಗಳೊಂದಿಗೆ ಬಂದರು. ಹಿಮವಂತನು ಅವರಿಗೆ ಷೋಡಶೋಪಚಾರಗಳನ್ನು ಮಾಡಿ ಬಂದ ಕಾರಣವೇನೆಂದು ಕೇಳಿದನು.

"ದೇವಾಧಿದೇವಾ! ನಿನಗೆ ತಿಳಿಯದುದೇನೂ ಇಲ್ಲ. ಮಹಾಶಕ್ತಿ ದಕ್ಷನ ಕುಮಾರಿಯಾಗಿ ಸತೀ ಎಂಬ ಹೆಸರಿನಲ್ಲಿ ಶಿವನನ್ನು ಮದುವೆಯಾಗಿ ಕಡೆಗೆ ಶರೀರವನ್ನು ತ್ಯಜಿಸಿದಳಷ್ಟೆ? ಸತಿ ಹೋದ ಮೇಲೆ ಶಿವನು ದೊಡ್ಡ ವಿರಕ್ತಿಯಿಂದ ತಪಸ್ಸುಮಾಡಿಕೊಂಡಿದ್ದಾನೆ. ಆದರಿಂದ ಲೋಕಕ್ಕೆ ಯಾರ ಭಯವೂ ಇಲ್ಲದಾಗಿದೆ. ತಾರಕಾಸುರನೆಂಬವನು ಲೋಕಪೀಡಕನಾಗಿ ಮೇಲೆ ಮೇಲೆ ವರ್ಧಿಸಿಕೊಂಡಿದ್ದಾನೆ. ಆದುದರಿಂದ ನೀನು ಮೇನಕಾ ಸಹಿತನಾಗಿ ಆ ಮಹಾಶಕ್ತಿ ದೇವಿಯನ್ನು ತಪಸ್ಸಿನಿಂದ ಮೆಚ್ಚಿಸಿ, ಅವಳು ನಿಮ್ಮ ಮಗಳಾಗಿ ಹುಟ್ಟುವಂತೆ ವರ ಪಡೆಯಬೇಕು" ಎಂದು ದೇವತೆಗಳು ಹಿಮವಂತನಿಗೆ ಪ್ರೇರೇಪಣೆ ಮಾಡಿದರು.

ಅಷ್ಟಕ್ಕೆ ಬಿಡದೆ ಬ್ರಹ್ಮ, ವಿಷ್ಣು, ಮಹೇಂದ್ರಾದಿಗಳು ವಿಂಧ್ಯ ಪರ್ವತಕ್ಕೆ ಹೋಗಿ, ಅಲ್ಲಿ ತಪಸ್ಸಿನಲ್ಲಿ ಮಗ್ನಳಾಗಿದ್ದ ಮಹಾದೇವಿಯನ್ನು ಬಗೆ ಬಗೆಯಾಗಿ ಸ್ತೋತ್ರ ಮಾಡತೊಡಗಿದರು.

ಆಗ ಅವರ ಮುಂದೆ ದಿವ್ಯ ಕಾಂತಿಗಳನ್ನು ಎಲ್ಲಾ ದಿಶೆಗಳಿಗೂ ಚಿಮ್ಮಿಸುತ್ತ, ಸಾವಿರ ಕೈಗಳಲ್ಲಿ ತ್ರಿಶೂಲವೇ ಮೊದಲಾದ ಆಯುಧಗಳನ್ನು ಧರಿಸಿಕೊಂಡಿದ್ದ ಪರದೇವತೆ ಅವರ ಮುಂದೆ ಪ್ರತ್ಯಕ್ಷಳಾದಳು. ಆಗ ಬ್ರಹ್ಮಾದಿಗಳು ಅವಳ ಮುಂದೆ ಕೈಜೋಡಿಸಿ, " ತಾಯೇ! ಭಗವತೀ! ನೀನು ದಕ್ಷನಿಗೆ ಕುಮಾರಿಯಾಗಿ ಹುಟ್ಟಿ, ಸತೀ ಎಂಬ ಹೆಸರಿನಿಂದ ಶಿವನನ್ನು ಮದುವೆಯಾಗಿ ಶರೀರ ತ್ಯಾಗಮಾಡಿದವಳು. ದಕ್ಷನ ಅಹಂಭಾವದ ಕೋಪವೇ ಅದಕ್ಕೆ ಕಾರಣವಾಯಿತು. ಈಗ ಸತೀ ವಿಯೋಗದಿಂದ ವಿರಕ್ತನಾದ ಶಿವನು ತಪಸ್ಸಿನಲ್ಲಿ ಮುಳುಗಿ ಹೋಗಿದ್ದಾನೆ. ಆದುದರಿಂದ ತಾರಕಾಸುರನೇ ಮೊದಲಾದವರು ಭಯವಿಲ್ಲದೆ ಯಥೇಚ್ಛೆಯಾಗಿ ಲೋಕವನ್ನು ಪೀಡಿಸುತ್ತಿದ್ದಾರೆ. ಈಗ ನೀನು ದಯಮಾಡಿ ಮೇನಕೆಯ ಗರ್ಭದಲ್ಲಿ ಹಿಮಂತನ ಮಗಳಾಗಿ ಪಾರ್ವತಿ ಎನಿಸಿ ಶಿವನನ್ನು ವಿವಾಹಮಾಡಿಕೊಂಡು, ತಾರಕಾಸುರಾದಿಗಳ ಸಂಹಾರಕ್ಕೆ ವೀರ ಪುತ್ರನನ್ನು ಹೆತ್ತು ಕೊಡಬೇಕು ಅಮ್ಮಾ " ಎಂದರು.

ಮಹಾದೇವಿ ಬ್ರಹ್ಮ ವಿಷ್ಣ್ವಾದಿಗಳ ಕೋರಿಕೆಯನ್ನು ನೆರವೇರಿಸುವೆನೆಂದು ವಚನವಿತ್ತು ಅಂತರ್ಹಿತಳಾದಳು.

ಇತ್ತರಲ್ಲಿ ಮೇನಕಾ ಹಿಮವಂತರು ಬ್ರಹ್ಮ ಮೊದಲಾದವರ ಇಷ್ಟದಂತೆ, ಅವರು ಹೇಳಿದ ಕ್ರಮದಲ್ಲಿ ತಪೋ ನಿಯಮವನ್ನು ಹಿಡಿದು, ಚೈತ್ರಶುದ್ಧ ಪಾಡ್ಯದ ದಿನದಿಂದ ಇಪ್ಪತ್ತೇಳು ವಾರಗಳ ವರೆಗೆ ಅತ್ಯಂತ ಭಕ್ತಿಯಿಂದ ಪರದೇವತೆಯನ್ನು ಪೂಜಿಸಲು ತೊಡಗಿದರು.

ಪರದೇವತೆ ಅವರ ಭಕ್ತಿಗೆ ಸಂತೋಷಪಟ್ಟು ಅವರ ಮುಂದೆ ಪ್ರತ್ಯಕ್ಷಳಾಗಿ ಏನು ವರ ಬೇಕೆಂದು ಕೇಳಿದಳು.

ಆಗ ಮೇನಕಾ ಹಿಮವಂತರು " ತಾಯೇ! ನಿನ್ನ ದಯದಿಂದ ನಮ್ಮ ಜನ್ಮ ಸಾರ್ಥಕವಾಗುವಂತೆ ತಾರಕವಾಯಿತು. ನಮಗೆ ಬಲ ಶೌರ್ಯಗಳಿಂದ ಗುಣಾಢ್ಯರಾದ ನೂರುಮಂದಿ ಪುತ್ರರನ್ನು ಪ್ರಸಾದಿಸು. ನೀನು ನಮಗೆ ಕುಮಾರಿಯಾಗಿ ಹುಟ್ಟಿ, ಲೋಕರಕ್ಷಣಾರ್ಥವಾಗಿ ಪರಮಶಿವನನ್ನು ಮದುವೆಯಾಗಿ ನಮಗೆ ಶಾಶ್ವತ ಕೀರ್ತಿಯನ್ನು ಬರಿಸು " ಎಂದು ಕೇಳಿಕೊಂಡರು.

ಅವರ ಇಷ್ಟವನ್ನು ನೆರವೇರಿಸುವೆನೆಂದು ಹೇಳಿ ಪರದೇವತೆ ಅಂತರ್ಧಾನಳಾದಳು.





# ಕವುಜಗದ ಸಾಕ್ಷಿ

ಬಾಗ್ದಾದು ನಗರದ ಸಮೀಪದಲ್ಲಿದ್ದ ಗುಡ್ಡಗಾಡು ಪ್ರದೇಶದಲ್ಲಿ ಭಯಂಕರನಾದ ಒಬ್ಬ ದೊಡ್ಡ ಕಳ್ಳನು ಅಡಗಿಕೊಂಡಿದ್ದನು. ಅವನು ಒಳ್ಳೆಯ ಬಲಿಷ್ಠನಾಗಿ, ಯುವಕ ಪ್ರಾಯದವನು. ಅವನು ವಾಯು ವೇಗದಂತೆ ಓಡುವನು. ಮಿಂಚು ಹೊಳೆಯುವ ಹಾಗೆ ಕತ್ತಿಯನ್ನು ಝಳಪಿಸಿ ಪ್ರಾಣಹರಣ ಮಾಡಿ ಬಿಡುವನು. ಅವನು ಯಾವ ದಾರಿಯಲ್ಲಿ ಯಾವಾಗ ಹೇಗೆ ಬಂದು ಬೀಳುವನೋ ಯಾರಿಗೂ ಗೊತ್ತಾಗದು. ಅವನನ್ನು ಹಿಡಯಲು ಯಾರಿಂದಲೂ ಸಾಧ್ಯವಿರಲಿಲ್ಲ. ಅಂತಲೇ ಅವನ ಧೈರ್ಯಕ್ಕೂ, ಕ್ರೌರ್ಯಕ್ಕೂ ಭಯದ ಗಂಧವೇ ಇರಲಿಲ್ಲ.

ಅವನಿರುವ ಗುಡ್ಡಗಾಡು ದಾರಿಯಲ್ಲಿ ಯಾವ ಪ್ರಯಾಣಿಕರಾದರೂ ಕಂಡುಬಂವರೆ ಹಠಾತ್ತಾಗಿ ಬಂದು ಅವರ ಮೇಲೆ ಬಿದ್ದು ತಲೆಯನ್ನು ತರಿದು ಹಾಕಿ, ಅವರ ಹತ್ತಿರ ಇದ್ದುದನ್ನೆಲ್ಲಾ ದೋಚಿಕೊಂಡು ಗುಡ್ಡಗಳಾಚೆಗೆ ಓಡಿ ಹೋಗುವನು. ಯಾರನ್ನೂ ಪ್ರಾಣದೊಂದಿಗೆ ಹೋಗಲು ಬಿಡುವವನಲ್ಲ. ಅವನನ್ನು ಹಿಡಿಸಲು ಸುಲ್ತಾನನ ಭಟರು ಎಷ್ಟೋ ಪ್ರಯತ್ನಗಳನ್ನು ಮಾಡಿ ವಿಫಲರಾಗಿದ್ದರು.

ಒಂದು ದಿನ ಸಾಯಂಕಾಲ ಒಬ್ಬ ಮುದುಕ ಪ್ರಯಾಣಿಕನು ಗುಡ್ಡಗಾಡಿನ ದಾರಿ ಹಿಡಿದು ನಡೆದು ಬರುತ್ತಿದ್ದನು. ಅವನು ಬೇರೊಂದು ಪ್ರಾಂತದವನಾಗಿದ್ದನು. ಅವನ ಕೈಯಲ್ಲಿ ಒಂದು ಚೀಲದ ಗಂಟು ಇದ್ದಿತು. ಅದನ್ನು ಆಗಾಗ ಹೆಗಲಿಗೂ, ಕಂಕುಳಿಗೂ ಕೈಗೂ ಮಾರ್ಪಡಿಸಿಕೊಂಡು, ಕಷ್ಟದಿಂದ ನಡೆಯುತ್ತಿದ್ದನು.

ಗುಡ್ಡದ ಬಂಡೆಗಳ ಮರೆಯಲ್ಲಿ ಅವನನ್ನು ನೋಡಿದ ಕಳ್ಳನು ಥಕ್ಕನೆ ಬಂದು ಮುದುಕನ ದಾರಿಗೆ ಅಡ್ಡವಾಗಿ ನಿಂತು, "ಎಲೋ ಮುದುಕಾ! ಇನ್ನು ಕಷ್ಟಪಟ್ಟು ನಡೆಯಬೇಕಾಗಿಲ್ಲ. ನಿನ್ನ ಎಲ್ಲಾ ಕಷ್ಟಗಳೂ ಈಗಲೇ ಪರಿಹಾರವಾಗಿ ಬಿಡುತ್ತವೆ. ತುಂಬ ಹಗುರಾಗಿ ಹಾರಿಹೋಗಬಹುದು." ಎಂದು ಗಹಗಹಿಸಿ ನಕ್ಕನು.

ಮುದುಕನು ಒಂದೂ ತಿಳಿಯದೆ, "ಏಕೆ? ಏನಾಯಿತು? ನನಗೊಂದೂ ಅರ್ಥವಾಗಲಿಲ್ಲವಪ್ಪಾ." ಎಂದನು.

"ನಿನಗೆ ಸಾವು ಬಂತು" ಎಂದು ಕತ್ತಿಯನ್ನು ಎತ್ತಿದನು ಕಳ್ಳ.

ಅರೇಬಿಯಾ ಕಥೆ



ಭಯಕಂಪಿತನಾದ ಮುದುಕನು ದೀನ ದನಿಯಿಂದ, "ಹುಡುಗಾ! ಈ ಚೀಲದಲ್ಲಿರುವ ಹಣ ನಾನು ಇಷ್ಟು ಕಾಲದವರೆಗೆ ನಾನಾ ಕಷ್ಟದಿಂದ ಸಂಪಾದಿಸಿಕೊಂಡದ್ದು. ನನ್ನ ಹೆಂಡತಿ ಸತ್ತು ಹೋದಳು, ನನ್ನ ಒಬ್ಬಳೇ ಒಬ್ಬಳು ಮಗಳು ಆ ನಗರದಾಚೆಗಿರುವ ಗ್ರಾಮದಲ್ಲಿ ವಾಸವಾಗಿದ್ದಾಳೆ. ನಾನು ಮುದುಕನಾಗಿ ಹೋದೆ, ಉಳಿದ ಕಾಲವನ್ನು ನನ್ನ ಮಗಳ ಮನೆಯಲ್ಲೇ ಇದ್ದು ಕಳೆಯಲು ಹೋಗುತ್ತಿದ್ದೇನೆ. ಈ ಹಣದಲ್ಲಿ ಅರ್ಧ ನೀನು ತೆಗೆದುಕೊಂಡು, ಉಳಿದದ್ದು ನನಗೆ ಬಿಡಪ್ಪಾ. ದೇವರು ನಿನಗೆ ಒಳ್ಳೇದು ಮಾಡುತ್ತಾನೆ. ಈ ಮುದುಕನನ್ನು ಹೋಗಲು ಬಿಡಪ್ಪಾ." ಎಂದನು.

ಆದಕ್ಕೆ ಕಳ್ಳನು ವಿಕಟವಾಗಿ ನಕ್ಕು, "ಅದೆಲ್ಲಾ ನನ್ನ ಪದ್ಧತಿಯೇ ಅಲ್ಲ. ನೀನು ಸತ್ತ ಮೇಲೆ ನಿನ್ನ ಹಣ ನಾನು ತಿಂದರೇನು? ನಿನ್ನ ಮಗಳು ತಿಂದರೇನು? ಸತ್ತ ಮೇಲೆ ನಿನಗೇಕೆ ಆ ಚಿಂತೆ? ಇರುವುದನ್ನೆಲ್ಲಾ ತೆಗೆದುಕೊಳ್ಳುವುದೇ ನನ್ನ ಕ್ರಮ. ಕ್ರಮ ತಪ್ಪುವುದು ನನ್ನ ಜಾಯಮಾನವೇ ಅಲ್ಲ!" ಎಂದನು.

"ಅಯ್ಯೋ ನನ್ನ ಕರ್ಮವೇ!" ಎಂದು ಮುದುಕನು ಸಂಕಟದಿಂದ ನರಳಿ, "ಸರಿ. ನನಗೆ ಯಾರೂ ಸಹಾಯಕರಿಲ್ಲ. ಎಲ್ಲಾ ತೆಗೆದುಕೋ. ನನ್ನ ಪಾಡಿಗೆ ಹೋಗುತ್ತೇನೆ" ಎನ್ನುತ್ತ ಹಣದ ಚೀಲವನ್ನು ಕೆಳಗಿಟ್ಟನು.

ಕಳ್ಳನು ಹಣದ ಚೀಲವನ್ನು ಎತ್ತಿಕೊಂಡು ಮತ್ತೊಮ್ಮೆ ದೊಡ್ಡ ದನಿಯಿಂದ ನೆಗಾಡಿ, "ನಿನ್ನ ಪಾಡಿಗೆ ಹೋಗುವುದೆಲ್ಲಿಗೆ? ಪ್ರಾಣವಿದ್ದರೆ ತಾನೇ ಹೋಗುವಿ?" ಎಂದನು.

"ಇದೆಂಥಾ ಪಾಪ! ನನ್ನ ಹತ್ತಿರವಿರುವ ಹಣವನ್ನೆಲ್ಲಾ ಕೊಟ್ಟೆನಲ್ಲಪ್ಪಾ? ಇನ್ನು ನನ್ನನ್ನು ಕೊಲ್ಲುವುದೇತಕ್ಕೇ?" ಎಂದನು ಮುದುಕ ಆಶ್ಚರ್ಯದಿಂದ.

"ದೋಚಿಕೊಂಡವರನ್ನು ಕೊಂದುಬಿಡುವುದೇ ನನ್ನ ಅಭ್ಯಾಸ" ಎಂದು ಕಳ್ಳನು ಕತ್ತಿಯನ್ನು ಮೇಲೆತ್ತಿದನು.

ಮುದುಕನು ಒಣ ತರಗೆಲೆಯಂತೆ ನಡುಗುತ್ತ, ಸುತ್ತಲೂ ನೋಡಿದನು. ಎಲ್ಲಿಯೂ ಯಾರೂ ಕಾಣಲಿಲ್ಲ.

ಅವನು ಮುಂಡುಗಾಲೂರಿ ಕುಳಿತು ದೈವ ಪ್ರಾರ್ಥನೆ ಮಾಡುತ್ತಾ, ತಲೆಯನ್ನು ಮೇಲಕ್ಕೆ ಎತ್ತಿದನು, ಆಕಾಶದಲ್ಲಿ ಅವನಿಗೆ ಒಂದೇ ಒಂದು ಕವುಜಗ ಹಕ್ಕಿ ಹಾರುವುದು ಕಂಡಿತು.

ಮುದುಕನು ದೊಡ್ಡ ಕಂಠದಿಂದ, "ಓ ಕವುಜಗ ಹಕ್ಕೀ! ಇಲ್ಲಿ ನನ್ನ ಮೇಲೆ ನಡೆಯುವ ಘೋರಕ್ಕೆ ನೀನೇ ಸಾಕ್ಷಿ. ಈ ಕಳ್ಳ ನನ್ನನ್ನು ಅನ್ಯಾಯವಾಗಿ ಕೊಲ್ಲುತ್ತಾನೆ. ಸ್ವಲ್ಪವೂ ಇದಿರು ತಿರುಗದೆ ನನ್ನ ಹತ್ತಿರ ಇದ್ದುದನ್ನೆಲ್ಲಾ ಕೊಟ್ಟಿದ್ದೇನೆ. ಆದರೂ ನನ್ನನ್ನು ಸುಮ್ಮನೆ ಬಿಡದೆ ಕೊಲ್ಲುತ್ತಾನೆ. ನೀನೇ ನೋಡಿ ನೆನಪಿಟ್ಟುಕೋ!" ಎಂದನು.

ಅವನ ಮಾತು ಮುಗಿಯುವಷ್ಟರಲ್ಲಿ ಕಳ್ಳನು ಅವನ ತಲೆಯನ್ನು ಕಡಿದುಬಿಟ್ಟನು.

ಮುಂದೆ ಎರಡು ವರ್ಷ ಕಳೆಯಿತು. ಆ ಕಳ್ಳನ ಹತ್ತಿರ ಹೇರಳ ಹಣ ಸೇರಿತು. ದೊಡ್ಡ ಧನವಂತನಾದನು. ಆಮೇಲೆ ಅವನಿಗೆ ಕೈನೋವು ಪ್ರಾರಂಭವಾಗಿ ಔಷಧ ಹಚ್ಚಿ ಗುಣಪಡಿಸಿಕೊಂಡನು. ಆದರೂ ಅವನ ಬಲವು ತಗ್ಗಿತು. ಇನ್ನು ಒಳ್ಳೆಯ ಹೆಸರು ಸಂಪಾದಿಸಬೇಕೆಂದು ತೋರಿತು. ದೊಡ್ಡ ಮನುಷ್ಯನ ಹಾಗೆ ಪಟ್ಟಣದಲ್ಲಿ ಬಂದು ಸ್ಥಿರನಿವಾಸ ಏರ್ಪಡಿಸಿಕೊಂಡನು. ಅವನು ಚದುರಂಗದಲ್ಲಿ ಬಹಳ ಗಟ್ಟಿಗನಾದುದರಿಂದ, ವಿನೋದ ಶಾಲೆಯಲ್ಲಿ ಪ್ರಮುಖರೊಂದಿಗೆ ಅವನೂ ಆಡುತ್ತಿದ್ದನು. ಅಲ್ಲಿ ಚದುರಂಗದ ಹುಚ್ಚಿನ ಸುಲ್ತಾನನಿಗೂ ಅವನಿಗೂ ಬಹಳ ಅಚ್ಚುಮೆಚ್ಚಾಯಿತು.

ಕೆಲವೇ ದಿನಗಳಲ್ಲಿ ಸುಲ್ತಾನನಿಗೂ ಕಳ್ಳನಿಗೂ ಅತ್ಯಂತ ಸ್ನೇಹವಾಯಿತು. ಸುಲ್ತಾನನೂ ಕಳ್ಳನೂ ಕೂಡಿ ಔತಣ ಮಾಡುವುದೂ, ಮದ್ಯ ಸೇವಿಸುವುದೂ ಸರ್ವ ಸಾಧಾರಣದ ವಿಷಯವಾಯಿತು. ಅಂತಹ ಸಮಯದಲ್ಲಿ ಕಳ್ಳನು ಹಿಂದೆ ತಾನು ದಾರಿ ದೋಚಿಕೊಳ್ಳುತ್ತಿದ್ದಾಗ, ಜನರು ಎಷ್ಟೆಲ್ಲಾ ಹೆದರುವರು, ಕಿರುಚುವರು. ಹಣದ ಆಶೆ ಜನರಿಗೆ ಎಷ್ಟು ವಿಪರೀತವಾಗಿದೆ ಎಂಬುದನ್ನು ಬಣ್ಣಿಸುವನು. ತಾನೇ ಆ ಕಳ್ಳನೆಂದು ಮಾತ್ರ ಹೇಳದೆ, ಕಳ್ಳನ ಪ್ರತಾಪದ ಮುಂದೆ ಜನರು ಒದ್ದಾಡುವುದನ್ನು ರಂಗುರಂಗಾಗಿ ಹೇಳುವನು. ಸುಲ್ತಾನನೂ ರಸಿಸಿಕೊಂಡು ಕೇಳುವನು.

ಒಂದು ದಿನ ರಾತ್ರಿ ಇಬ್ಬರೂ ತೃಪ್ತಿಯಾಗುವಂತೆ ಔತಣದೂಟ ಮಾಡುತ್ತಾ, ದ್ರಾಕ್ಷಾರಸ ಕುಡಿದರು. ಕಳ್ಳನು ಅತಿಯಾಗಿಯೇ ದ್ರಾಕ್ಷಾರಸ ಕುಡಿದು ಉನ್ಮತ್ತನಾದನು. ಆ ಸಮಯದಲ್ಲಿ ಸುಲ್ತಾನನ ನೌಕರನು ದೊಡ್ಡದೊಂದು ತಟ್ಟೆಯಲ್ಲಿ ಇಡಿಯಾಗಿ ಬೇಯಿಸಿದ ಕವುಜಗವನ್ನು ತಂದಿಟ್ಟನು. ಅದನ್ನು ನೋಡುತ್ತಾ ಕಳ್ಳನು, "ಓ ಕವುಜಗಾ!" ಎಂದು ನಗಲು ತೊಡಗಿದನು. "ಸಾಕ್ಷೀ ಹೇಳುವ ಹಕ್ಕಿ ಇದು! ಆಹಾ! ಯಾವನ ವಿರುದ್ಧ ಹೇಳ



ಲಿದೆಯೋ ಅವನ ಹೊಟ್ಟೆಗೇ ಹೋಗುತ್ತದೆ!" ಎನ್ನುತ್ತಾ ಜೋರು ಜೋರಾಗಿ ನಗ ತೊಡಗಿದನು.

ಸುಲ್ತಾನನು ಆಶ್ಚರ್ಯಪಡುತ್ತ, "ಹಾಗೇನಾಯಿತು? ಇದನ್ನು ನೋಡಿ ಅಷ್ಟು ನಗುವಿಯೇಕೆ? ನಾನೂ ಸ್ವಲ್ಪ ನಗಬಾರದೆ? ನನಗೂ ಹೇಳಲಾರೆಯಾ! ಅದೇನು ತಮಾಷೆಯೋ!" ಎಂದನು.

"ಮತ್ತೇನಿಲ್ಲ. ಮನುಷ್ಯ ಮುಳುಗಿ ಸಾಯುವಾಗ ಹುಲ್ಲು ಕಡ್ಡಿಯನ್ನೂ ಹಿಡಿಯುತ್ತಾನಂತೆ. ಹಾಗೆ ಆ ಮುದುಕ ನನ್ನ ಕೈಯ ಕತ್ತಿಯಿಂದ ಸಾಯುವಾಗ ಆಕಾಶದಲ್ಲಿ ಹಾರಿದ ಈ ಕವುಜಗಾನ ನೋಡಿ ನೀನೇ ಸಾಕ್ಷಿ ಎಂದು ಹೇಳಿ, ಪ್ರಾಣಬಿಟ್ಟ! ಪ್ರಾಣ ಬಿಡುವುದೇನು ಬಂತು? ನಾನೇ ಅವನ ತಲೆ ಕಡಿದೆ!" ಎಂದನು.

ಸುಲ್ತಾನನು ಒತ್ತಾಯಿಸಿ ಕೇಳಲು ತಾನೇ ಆ ಕಳ್ಳನೆಂದೂ, ಗತ ಜನ್ಮದ ಒಳಿತು ಕೆಡುಕುಗಳನ್ನು ಈ ಜನ್ಮದಲ್ಲಿ ಯಾರೂ ಗಣಿಸುವುದಿಲ್ಲವೆಂದೂ, ತಾನು ಹಿಂದೆ ಯಾರಾಗಿದ್ದೆನೆಂಬುದನ್ನೆಲ್ಲಾ ಹೇಳಿಬಿಟ್ಟನು.

ಸುಲ್ತಾನನ ಕಣ್ಣು ಕೆಂಪಾಗ ತೊಡಗಿತು. ತಾನು ಹಿಂದೆ ಹಿಡಿಸಲು ನೋಡಿ ವಿಫಲನಾದುದು ಈ ಭಯಂಕರ ಕಳ್ಳನನ್ನೇನಾ! ಇತ್ತೀಚೆಗೆ ಅವನ ಹಾವಳಿ ಇಲ್ಲದುದನ್ನು ನೋಡಿ, ಬೇರೆಲ್ಲಿಗೋ ಹೋದನೆಂದು ಕೊಂಡರೆ, ತನ್ನ ಮನೆಯಲ್ಲೇ ಇದ್ದಾನೆ!

ಕೋಪ ಭರದಿಂದ ಸುಲ್ತಾನನು "ನಿಲ್ಲಿಸು ನಿನ್ನ ನಗುವಿನ ಪ್ರತಾಪ! ಮಹಾಪಾಪೀ!" ಎಂದು ಗರ್ಜಿಸಿದನು.

ಕಳ್ಳ ಗಾಬರಿಬಿದ್ದು "ಏನಾಯಿತು ಪ್ರಭೂ!" ಎಂದನು.

"ಆ ಕವುಜಗ ಹಕ್ಕಿ ಈಗ ಸಾಕ್ಷಿ ಹೇಳಿತು. ನಾನು ಹಿಡಿಸಬೇಕೆಂದಿದ್ದ ಭಯಂಕರ ಚೋರನು ನೀನೆಂದು ತಿಳಿಯಿತು! ಇಂಥಾ ಸಾಕ್ಷಿಯನ್ನು ಇರಿಸಿದ ಆ ಮುದುಕನನ್ನು ನಾನು ಮೆಚ್ಚಿದೆನು! ನೀನು ಮಾಡಿದ್ದು ಗತ ಜನ್ಮದ ಪಾಪಗಳಲ್ಲ. ಈ ಜನ್ಮದ ಇದೇ ಮುಖ, ಇದೇ ಶರೀರ, ಇದೇ ಕೈಗಳಿಂದ ಮಾಡಿದ್ದೀ! ಇದನ್ನು ಗತ ಜನ್ಮವನ್ನಾಗಿ ಮಾಡಬೇಕಾದವನು ನಾನು" ಎಂದು ಸುಲ್ತಾನನು ಚಪ್ಪಾಳೆ ತಟ್ಟಿದನು.

ಓಡಿಬಂದ ಬಿಚ್ಚುಗತ್ತಿಯ ಭಟರಿಗೆ ಸುಲ್ತಾನನು ಕಳ್ಳನನ್ನು ತೋರಿಸಿ, "ಮನುಷ್ಯ ರೂಪದಲ್ಲಿರುವ ಈ ಘಾತುಕ ಮೃಗವನ್ನು ಒಯ್ದು ತತ್‌ಕ್ಷಣವೇ ಶಿರಚ್ಛೇದ ಮಾಡಿರಿ!" ಎಂದು ಆಜ್ಞಾಪಿಸಿದನು.

ಕಳ್ಳನಿಗೆ ಶಿರಚ್ಛೇದವಾಯಿತು. ಮುದುಕನು ಮರಣ ಸಮಯದಲ್ಲಿ ಕೇಳಿಕೊಂಡ ಸಾಕ್ಷ್ಯವು ಬಹಳ ಬಲವಾದ ಸಾಕ್ಷ್ಯವಾಗಿ ಫಲಿಸಿ, ಮುದುಕನ ಆತ್ಮಕ್ಕೆ ಶಾಂತಿ ಲಭಿಸಿತು.



# ನಾಶದ ದಾರಿ ಹಿಡಿದ ಜೀವಜಾಲ

ಅಪರೂಪವೆನಿಸುವ ಚಿತ್ರ ವಿಚಿತ್ರಗಳಾದ ಜಂತುಜಾಲಗಳೆಷ್ಟನ್ನೋ ಪ್ರಕೃತಿ ಸೃಷ್ಟಿಸಿದೆ. ನಾವು ಅವುಗಳನ್ನು ಸಂರಕ್ಷಿಸಲು ಬಲವಾದ ಕಾರ್ಯ ಮಾಡದೆ ಹೋದರೆ ಅವು ಕಾಲಕ್ರಮದಲ್ಲಿ ನಾಶವಾಗಿ ಹೋಗುವ ಅಪಾಯವಿದೆ.

ಕಳೆದ ಶತಕದ ಮಧ್ಯದಲ್ಲಿ ಉತ್ತರ ಅಮೆರಿಕಾದ ಪ್ರತಿ ಜಿಹಣದಲ್ಲಿಯೂ ಪ್ರತ್ಯೇಕ ಆಕರ್ಷಣೆಯಾಗಿದ್ದುದು ಪ್ಯಾಸೆಂಜರ್ ಪೀಜಿಯನ್ ಎಂಬ ಪಾರಿವಾಳದ ಆಡಿಗೆ. ಆ ಪಾರಿವಾಳಗಳು ಕೊಂಬೆಗಳಲ್ಲಿ ಗೂಡು ಕಟ್ಟಿಕೊಂಡು ಗುಂಪುಗುಂಪಾಗಿ ವಾಸವಾಗಿರುತ್ತವೆ. ಮಿಚಿಗಾನ್, ಪೆನ್ಸಿಲ್‌ವೇನಿಯಾ ಪ್ರಾಂತಗಳಲ್ಲಿ ಒಂದು ವರ್ಷ ತಿರುಗುವುದರೊಳಗೆ ಒಂದೂವರೆ ಕೋಟಿ ಪಾರಿವಾಳಗಳು ಮನುಷ್ಯರಿಂದ ಆಹಾರಕ್ಕಾಗಿ ಕೊಲ್ಲಲ್ಪಟ್ಟವು. ೧೮೮೮ ರ ಕಾಲಕ್ಕೆ ಆ ಪಾರಿವಾಳಗಳ ಜಾತಿ ಬಹಳ ಮಟ್ಟಿಗೆ ನಾಶವಾಗಿಹೋದುವು. ಸಿನ್‌ಸಿನಾಟೀ ಪ್ರಾಣಿಪ್ರದರ್ಶನ ಶಾಲೆಯಲ್ಲಿ ಉಳಿದಿದ್ದ ಒಂದೇ ಒಂದು ಈ ಜಾತಿಯ ಪಾರಿವಾಳವು ೧೯೧೪ ರಲ್ಲಿ ಸತ್ತುಹೋಯಿತು.

ಈ ಪಾರಿವಾಳದ ಜಾತಿಯು ಹಾಗೆಯೇ ನಶಿಸಿಹೋದ ಪಕ್ಷಿಜಾತಿಗಳೂ, ಪ್ರಾಣಿಗಳೂ ಎಷ್ಟೋ ಇವೆ. ಚರಿತ್ರೆಗೆ ಎಟಕುವ ಮೇರೆಯಲ್ಲಿ ಮನುಷ್ಯನು ೧೦೦ ಪ್ರಾಣಿಜಾತಿಗಳನ್ನೂ ೧೫೦ ಪಕ್ಷಿಜಾತಿಗಳನ್ನೂ ನಿರ್ಮೂಲಿಸಿಬಿಟ್ಟಿದ್ದಾನೆ. ಪ್ರಸ್ತುತ ೧೦೦೦ ಜಾತಿಯ ಪ್ರಾಣಿಗಳೂ, ೨೦,೦೦೦ ಜಾತಿಯ ಗಿಡಗಳೂ ನಿರ್ಮೂಲವಾಗಿ ಹೋಗುವ ದಶೆಯಲ್ಲಿವೆ. ಹಾಗೆ ನಿರ್ಮೂಲವಾಗಿ ಹೋಗುವವುಗಳಲ್ಲಿ ತಿಮಿಂಗಿಲಗಳು ಮುಖ್ಯವಾದುವು.

ಕ್ಯೂಬಾದಲ್ಲಿಯೂ, ದಕ್ಷಿಣ ಅಮೆರಿಕಾದಲ್ಲಿಯೂ ಒಂದು ಕಾಲದಲ್ಲಿ ಪಟ್ಟೆಕುಚ್ಚು ಮರಕುಟಿಗ ಹಕ್ಕಿಗಳು ವಿಶೇಷವಾಗಿದ್ದುವು. ಅವು ವಾಸಮಾಡುವ ವೃಕ್ಷಗಳು ನಶಿಸಿ ಹೋದುದರಿಂದ ಆ ಪಕ್ಷಿಗಳು ಕೂಡಾ ಕಣ್ಮರೆಯಾಗುತ್ತಿವೆ. ಬೋರ್ನಿಯೋದಲ್ಲಿ ಒರಂಗುಟಾಂಗ್ ಎಂಬ ಬಾಲವಿಲ್ಲದ ಕೋತಿಗಳಿಗೂ ದಕ್ಷಿಣ ಅಮೆರಿಕಾದೊಳಗಿನ ಜಾಗುವಾರ್ ಎಂಬ ಚಿರತೆಗಳಿಗೂ ಇದೇ ಗತಿ ಬರುವ ಹಾಗೆ ಕಾಣುತ್ತದೆ.

ಅರೇಬಿಯನ್ ಓರಿಕ್ಸ್ ಪ್ರಾಣಿಗಳ ಸಂರಕ್ಷಣೆಗೆ ಅರಿಜೋನಾದೊಳಗಿನ ಫೀನಿಕ್ಸ್ ಪ್ರಾಣಿಪ್ರದರ್ಶನ ಶಾಲೆಯಲ್ಲಿ ಆವಾಸಗಳ ಏರ್ಪಾಟು ಮಾಡಲಾಗಿದೆ. ನಶಿಸಿಹೋಗುತ್ತಿರುವ ಹವಾಯ್ ನೀನೀ ಜಾತಿಗೆ ಸೇರಿದ ಬಾತು ಕೋಳಿಗಳನ್ನು, ಸರ್ ಪೀಟರ್ ಸ್ಕಾಟ್ ಕಂಡು ಹಿಡಿದು ಸ್ಲಿಮ್‌ಬ್ರಿಡ್ಜ್‌ಗೆ ಸಮೀಪದಲ್ಲಿ ರಕ್ಷಣೆಯ ಏರ್ಪಾಟು ಮಾಡಿದನು.







## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



K. P. A. Swamy



Prabu Sankar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಮಾರ್ಚಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಜನವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ದಿಕ್ಕಿಲ್ಲದ ತಬ್ಬಲಿ ಹಕ್ಕಿಗೆ

ಎರಡನೇ ಫೋಟೋ : ಸಿಕ್ಕಿದಳೊಬ್ಬಳು ಅಕ್ಕರೆಯ ಅಮ್ಮ

ಕಳುಹಿಸಿದವರು : ಎಲ್. ಬೃಂದಾ, ೩೩. ಅರಿವುಮುತ್ತು ಆಚಾರಿ ಸ್ಟ್ರೀಟ್. ಮದರಾಸು-೫

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಬೋರ್ನಿಯೋ. ೨. ಬವೇರಿಯಾ. ೩. ಹೈಪಾ. ೪. ಸಾಯಿಬ್. ಸೂಯೆಜ್ ರೇವುಗಳು. ೫. ಅಮೂದಾರ್ಯಾ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.



"ಹನ್ನೊಂದು ವರ್ಷ
ವಯಸ್ಸಿನ ನನ್ನ ಪುಟ್ಟ
ಫುಟ್‌ಬಾಲ್-ಆಟಗಾರ!
ಒಂದು ದಿನ ಜಗತ್ತಿನಲ್ಲಿಯೆ
ಅತ್ಯುತ್ತಮ ಫೋರ್ವರ್ಡ್
ಆಗ್ತಾನೆ, ಖಂಡಿತ!"

# ಬೋರ್ನ್‌ವಿಟಾ ವರ್ಷಗಳು

ಅದಕ್ಕಾಗಿ ಒಂದುದಿನ ಅವರು ನಿಮ್ಮ ಉಪಕಾರ ಸ್ಮರಣೆ ಮಾಡುವರು.

ಬೆಳೆಯುವ ಮಕ್ಕಳು ಬೇರೆ ಎಲ್ಲ ಮಾಲ್ಟ್‌ಯುಕ್ತ ಪೇಯಗಳನ್ನು ಬಿಟ್ಟು ಬೋರ್ನ್‌ವಿಟಾ ಕುಡಿಯಲು ಏಕೆ ಇಷ್ಟಪಡುತ್ತಾರೆ? ತಮ್ಮ ಮಕ್ಕಳಿಗೆ ಬೋರ್ನ್‌ವಿಟಾ ಹೊರತು ಬೇರಾವುದೂ ಸಲ್ಲದೆಂದು ಎರಡು ತಲೆಮಾರುಗಳ ತಂದೆತಾಯಿಗಳು ಸಾಧಿಸುತ್ತಿರಲು ಕಾರಣವೇನು?

ಅದರ ಉಲ್ಲಾಸಕರ ರುಚಿಯುಷ್ಟೇ ಅಲ್ಲ, ಕ್ಯಾಡ್‌ಬರಿಸ್ ಹೆಸರು ಕೂಡ ಅಲ್ಲ — ಅದಕ್ಕಿಂತ ಹೆಚ್ಚಿನದು. ಎಷ್ಟೋ ಹೆಚ್ಚಿನದು, ಅದು ಬೋರ್ನ್‌ವಿಟಾ. ಬೆಳೆದುಕೊಂಡು ಬಲುವಾಗ ಕುಡಿಯಬೇಕಾದ ಪೇಯ.

ಕ್ಯಾಡ್‌ಬರಿಸ್
ಬೋರ್ನ್‌ವಿಟಾ

ಪಾಲನೆ ಪೋಷಣೆ ಸರಿಯಾಗಿ ಮಾಡಿರಿ.
ಮಕ್ಕಳಿಗೆ ಬೋರ್ನ್‌ವಿಟಾ ಕೊಡಿರಿ.




OBM/3784 KAN

# A red 'n' white super bubbling gum for bubbling fun

It's doubly - bubbly!
It's tutti - fruity!
It's soft 'n' juicy!
It's yummy - yummy!!!






# LEA

DOUBLE-COLOURED BUBBLE GUM

LEA CHEW-FUN (FOODS) PVT LTD
Surendranagar - 363 001, Gujarat

Only 25p.

*Pick one white*
*Take one free!*

DEALERSHIP ENQUIRIES WELCOME FROM UNREPRESENTED AREAS. WRITE TO:
THE MARKETING MANAGER, 51/4 HAINES ROAD, FRAZER TOWN, BANGALORE 560 005.

MASS/LEA 85

# ದಂತಕುಳಿಗಳನ್ನು ಕಂಡನು, ನನ್ನ ಮಗನು, ಒಂದು ದಿನ!

"ಅಮ್ಮಾ,
ಅನಿಲನ ಹಲ್ಲಿನಲ್ಲಿ
ತೂತಿವೆ"

"ಅದಕ್ಕೆ
ದಂತಕುಳಿ
ಅಂತಾರೆ ಮಗು"

"ಹೌದು...ಅದೇ ನಾ ಹೇಳಿದ್ದು.
ಮತ್ತೆ ನಾ ಅವನಿಗೆ ನನ್ನ
ಹಲ್ಲು ತೋರಿಸಿದೆ, ನನ್ನ ರುಚಿಕರ
ನೊರೆಯಿರುವ ಟೂಥ್‌ಪೇಸ್ಟ್
ಬಗ್ಗೆ ಹೇಳಿದೆ"

"ಅದು ಫೋರ್‌ಹೆನ್ಸ್
ಫ್ಲೋರೈಡ್ ಮಗು!"

"ಹೌದು...
ನೀನು ಯಾವಾಗಲೂ
ಹೇಳುತ್ತೀ ಅದು ತುಂಬಾ
ಒಳ್ಳೇದಿದೆ ಅಂತ, ಮತ್ತೆ
ನಂಗೂ ಅದು ಸೇರ್ತದೆ."

"ಯಾಕೆ ಒಳ್ಳೇದು ಗೊತ್ತಾ?
ನಿನ್ನ ಒಸಡುಗಳನ್ನು ಗಟ್ಟಿ
ಮಾಡ್ತದೆ, ಹಲ್ಲಿಗೆ ದೀರ್ಘ
ಆಯುಷ್ಯ ಕೊಡ್ತದೆ!"

"ಹೌದು ಮಮ್ಮಿ!
ಮಮ್ಮಿ ನಾನೀ
ಚಾಕ್‌ಲೇಟ್ ಕೇಕ್
ತಿನ್ನಲಾ? ಆಮೇಲೆ ಹಲ್ಲು ಬ್ರಶ್
ಮಾಡಿಕೊಳ್ತೇನೆ."

## ಫೋರ್‌ಹೆನ್ಸ್ ಫ್ಲೋರೈಡ್

**ಒಸಡು ಮತ್ತು ಹಲ್ಲು ಇವೆರಡನ್ನೂ ರಕ್ಷಿಸುವ
ರುಚಿಕರ, ನೊರೆಯುಳ್ಳ ಟೂಥ್‌ಪೇಸ್ಟ್**




331 F 183 KAN